## ರಾಜಸೇವಾಸಕ್ತ

# ಬಿ.ಎಂ. ಶ್ರೀಕಂಠಯ್ಯ




**ಆರ್ಯಾಂಬ ಪಟ್ಟಾಭಿ,** ಎಂ.ಎ.,
ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ
ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು

ಪ್ರಕಾಶಕರು
**ಆರ್ಯಾಂಬ ಪಟ್ಟಾಭಿ**
"ಸಂಕಲ್ಪಮಣಿಮಂದಿರ"
ದಿವಾನ್ಸ್ ರಸ್ತೆ, ಲಕ್ಷ್ಮೀಪುರಂ, ಮೈಸೂರು–೫೭೦೦೦೪

ರಾಜಸೇವಾಸಕ್ತ ಬಿ.ಎಂ. ಶ್ರೀಕಂಠಯ್ಯ

ಲೇಖಕರು : **ಆರ್ಯಾಂಬ ಪಟ್ಟಾಭಿ,** ಎಂ.ಎ., ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು, ಲಕ್ಷ್ಮೀಪುರಂ, ಮೈಸೂರು-೪.

ಪ್ರಕಾಶಕರು : **ಆರ್ಯಾಂಬ ಪಟ್ಟಾಭಿ,** ಲಕ್ಷ್ಮೀಪುರಂ, ಮೈಸೂರು.



ಪ್ರಥಮ ಮುದ್ರಣ : ೨೦೧೯

ಪುಟಗಳು : ೧೮೦

ಬೆಲೆ : ರೂ. ೧೫೦=೦೦

ಪುಸ್ತಕದ ಆಕಾರ : ಡೆಮ್ಮಿ ೧/೮

ಪುಸ್ತಕದ ಮುದ್ರಣಕ್ಕೆ ೭೦ ಜಿ.ಎಸ್.ಎಂ. ಮ್ಯಾಪ್‌ಲಿಥೋ ಕಾಗದ ಉಪಯೋಗಿಸಲಾಗಿದೆ.

ಡಿ.ಟಿ.ಪಿ. : ಶ್ರೀ ಚಾಮುಂಡೇಶ್ವರಿ ಎಂಟರ್‌ಪ್ರೈಸಸ್, ಮೈಸೂರು.



ಮುದ್ರಕರು : ರಾಘವೇಂದ್ರ ಪ್ರಿಂಟರ್ಸ್, ಮೈಸೂರು.




# ಅರ್ಪಣೆ



ದೇವಮ್ಮ ಬಿ.ಎಂ,ಶ್ರೀ

ಬೆಳ್ಳೂರು ಕುಟುಂಬದ ಕೀರ್ತಿಕಳಶ ಅವರು
ಮೂರು ತಲೆಮಾರಿನವರಿಗೆ ಪ್ರೀತಿ ಗೌರವದ 'ಅಣ್ಣಯ್ಯ'ನವರು
ಅಪರೂಪದ ಶಿಕ್ಷಕರು, ವಾಗ್ಮಿಗಳು, ಬರಹಗಾರರು
ಆಚಾರ್ಯ, ಕನ್ನಡದ ಕಣ್ವ, 'ಶ್ರೀ' ಕಾವ್ಯನಾಮದವರು

ಹೊಸಗನ್ನಡ. ನವೋದಯದ
ನಾಂದಿಗೀತೆ ಹಾಡಿದವರು
ಕಾವ್ಯಕ್ಕೆ ನೂತನ ಶೃಂಗಾರ ಮಾಡಿದವರು
ಗದ್ಯಕ್ಕೆ ನವಶಕ್ತಿ ತುಂಬಿದವರು

ಗ್ರೀಕ್ ಮಾದರಿಯ ನಾಟಕಗಳನ್ನು ರಚಿಸಿದವರು
ಹೊಸ ಛಂದಸ್ಸಿನ ಪ್ರಯೋಗ ಮಾಡಿದವರು
ನಾಡು ನುಡಿಯ ಮುನ್ನಡೆಗಾಗಿ ದುಡಿದವರು
ಕನ್ನಡದ ಕೆಲಸಕ್ಕೆ ಕಂಕಣ ಕಟ್ಟಿ ನಿಂತವರು

ಕನ್ನಡ ನಾಡಿನ ಹೆಮ್ಮೆಯ ಪುತ್ರರು,
ದೊಡ್ಡಪ್ಪ ಬಿ.ಎಂ.ಶ್ರೀಕಂಠಯ್ಯ,
ದೊಡ್ಡಮ್ಮ ದೇವಮ್ಮ ಅವರಿಗೆ
ಭಕ್ತಿ ಗೌರವದಿಂದ ಈ ಕೃತಿ ಕಾಣಿಕೆ.

ಆರ್ಯಾಂಬ ಪಟ್ಟಾಭಿ.



# ಕೃತಜ್ಞತೆ

ರಾಜಸೇವಾಸಕ್ತ ಬಿ.ಎಂ.ಶ್ರೀಕಂಠಯ್ಯನವರ ಬದುಕು, ಬರಹಗಳನ್ನು ಕುರಿತು ಅವರ ಶಿಷ್ಯರು, ಮಿತ್ರರು, ಬಂಧುಗಳು, ಅಭಿಮಾನಿಗಳು ಲೇಖನಗಳನ್ನು ಬರೆದಿದ್ದಾರೆ, ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಆದರೆ ಅವರನ್ನು ಕುರಿತು ಎಷ್ಟು ಬರೆದರೂ ಸಾಲದು ಎನ್ನುವ ಸತ್ಯ ಕನ್ನಡಿಗರಿಗೆ ತಿಳಿದಿರುವ ವಿಚಾರ. ಯಾಕೆಂದರೆ ಕನ್ನಡ ಸಾಹಿತ್ಯವನ್ನು ನೂತನ ದಡಕ್ಕೆ ಕೊಂಡೊಯ್ದ ನಾವಿಕರವರು.

ಈ ಕೃತಿ ರಚನೆಗೆ ಹಲವಾರು ಗ್ರಂಥಗಳ, ಬಂಧುಮಿತ್ರರ, ಸಾಹಿತಿಗಳ, ಲೇಖನಗಳ ನೆರವು ಪಡೆದಿದ್ದೇನೆ. ಬಿ.ಎಂ.ಶ್ರೀಯವರ ಮರಿ ಮಗಳು ಶ್ರೀಮತಿ ವಿದ್ಯ ವಿಕ್ರಮ್ ಕೆಲವು ಭಾವಚಿತ್ರಗಳನ್ನು ನೀಡಿ ಸಹಕರಿಸಿದ್ದಾರೆ.

ಅವರೆಲ್ಲರಿಗೂ ನಾನು ಕೃತಜ್ಞಳಾಗಿದ್ದೇನೆ.

– **ಆರ್ಯಾಂಬ ಪಟ್ಟಾಭಿ.**

## ಒಳಪಿಡಿ

# ಬಿ.ಎಂ.ಶ್ರೀ. ಮೊದಲಿಗರು

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಸಾಹಿತ್ಯಿಕವಾಗಿ, ಸಾಮಾಜಿಕ ಮತ್ತು ರಾಜಕೀಯವಾಗಿ ಮೈಸೂರು ಸಂಸ್ಥಾನದಲ್ಲಿ ಹೊಸಕ್ರಾಂತಿಯನ್ನು ಹುಟ್ಟುಹಾಕಿ ಕನ್ನಡಿಗರ ಬಳಿಗೆ ಕಾವ್ಯ ಗಂಗೆಯನ್ನು ಹರಿಸಿದ ಮಹಾನ್ ವ್ಯಕ್ತಿ, ಶಕ್ತಿ ಬಿ.ಎಂ.ಶ್ರೀಕಂಠಯ್ಯನವರು ಹಲವಾರು ಸಾಧನೆಗಳಲ್ಲಿ ಮೊದಲಿಗರು.

ತಂದೆ ತಾಯಿಗೆ ಪ್ರಥಮ ಸಂತಾನ.

ವರ್ಷದ ಮೊದಲನೆಯ ತಿಂಗಳು ಜನವರಿಯಲ್ಲಿ ಜನನ.

ಬಿ.ಎ., ಬಿ.ಎಲ್., ಎಂ.ಎ. ಪರೀಕ್ಷೆಗಳಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಬಿ.ಎ., ಎಂ.ಎ. ತರಗತಿಗಳ ಸ್ಥಾಪನೆಗೆ ಕಾರಣರು. ಪ್ರಥಮ ಕನ್ನಡ ಪ್ರಾಧ್ಯಾಪಕರು.

ಇಂಗ್ಲಿಷ್, ಕನ್ನಡ–ಈ ಎರಡೂ ವಿಭಾಗಗಳಲ್ಲಿ ಏಕಕಾಲದಲ್ಲಿ ಪ್ರಾಧ್ಯಾಪಕರಾಗಿದ್ದ ಮೊದಲಿಗರು. (ಏಕೈಕ ವ್ಯಕ್ತಿ).

ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಆನರ್ಸ್ ತರಗತಿಗಳನ್ನು ಪ್ರಾರಂಭಿಸಿದರು. ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಹೊಸಬಗೆಯ ಕವಿತೆಗಳು, ನಾಟಕಗಳು, ಗ್ರಂಥಗಳು ಆಗಮಿಸಲು ಕಾರಣರು.

'ಇಂಗ್ಲಿಷ್ ಗೀತಗಳು" ಪ್ರಕಟಿಸಿ ಕಾವ್ಯದ ಹೊಸ ಹೆದ್ದಾರಿ ತೆರೆದರು. ಮೂರು ನಾಟಕಗಳನ್ನು ಬರೆದು ಮೊದಲಬಾರಿಗೆ ಗ್ರೀಕರ ಪ್ರಯೋಗಗಳನ್ನು ಕನ್ನಡಿಗರಿಗೆ ಪರಿಚಯಿಸಿದರು.

ಶಿಷ್ಯ ಪರಂಪರೆಯ ನಿರ್ಮಾಣಕ್ಕೆ ನಾಂದಿಯಾದರು.

ವಿಶ್ವವಿದ್ಯಾನಿಲಯದಲ್ಲಿ 'ಗ್ರಂಥಮಾಲೆ' ಸ್ಥಾಪಿಸಿ ಅಮೂಲ್ಯ ಗ್ರಂಥಗಳ ಪ್ರಕಟಣೆಗೆ ಮುಂದಾದರು.

'ಕನ್ನಡದ ಕೈಪಿಡಿ' ಬರೆಸಿದ ಪ್ರಥಮರು

'ಕನ್ನಡ ಸಾಹಿತ್ಯ ಚರಿತ್ರೆ'ಗೆ ಮೇಲ್ಪಂಕ್ತಿ ಹಾಕಿಕೊಟ್ಟ ಅಗ್ರಗಣ್ಯರು. ಕನ್ನಡ ಸಾಹಿತ್ಯದಲ್ಲಿ ಹೊಸ ಪ್ರಯೋಗಗಳನ್ನು ಮಾಡಿದವರು. ಪ್ರಥಮ ಕನ್ನಡದ ಚಳುವಳಿಗಾರರು.

'ಕನ್ನಡ ಸಾಹಿತ್ಯ ಪರಿಷತ್ತಿ'ನಲ್ಲಿ 'ಕನ್ನಡ ನುಡಿ' ವಾರಪತ್ರಿಕೆ ಹುಟ್ಟುಹಾಕಿದರು.

ಪರಿಷತ್ತಿನ 'ಅಚ್ಚುಕೂಟ' ಸ್ಥಾಪನೆಗೆ ಧನಸಹಾಯ ನೀಡಿ ನೆರವಾದರು.

ಪರಿಷತ್ತಿನಲ್ಲಿ 'ಮಹಿಳಾ ಶಾಖೆ' ಪ್ರಾರಂಭಿಸಿದರು.

'ರಾಜಸೇವಾಸಕ್ತ' ಬಿರುದು ಪಡೆದ ಪ್ರಥಮ ಕನ್ನಡ ಸಾಹಿತಿ. ಪರಿಷತ್ತಿನಲ್ಲಿ ಸಾಹಿತ್ಯ ಪರೀಕ್ಷೆಗಳನ್ನು ಆರಂಭಿಸಿದರು. ಎರಡು ಸಾವಿರ ವರ್ಷಗಳ  ಜೀವಾಳವನ್ನು 'ಕನ್ನಡ ಬಾವುಟ' ದಲ್ಲಿ ತುಂಬಿ ಜನತೆಗೆ ಅರ್ಪಿಸಿದ ಮೊದಲಿಗರು.

'ಸಂಭಾವನೆ' ಎಂಬ ಪ್ರಥಮ ಸಂಭಾವನಾ ಗ್ರಂಥವನ್ನು ಪಡೆದ ಮೊದಲಿಗರು. 'ಕನ್ನಡ ಲಿಪಿ ಸಂಸ್ಕರಣ'ಕ್ಕೆ ಪ್ರಯತ್ನಿಸಿದ ಪ್ರಥಮರು

'ವಯಸ್ಕರ ಶಿಕ್ಷಣ ಸಮಿತಿ'ಯ ಪ್ರಥಮ ಅಧ್ಯಕ್ಷರು.

❖

ಭಾಗ-೧

# ಬಿ. ಎಂ. ಶ್ರೀ : ಬದುಕು

'ಕಮ್ಮೆ ನಾಡು' ಆಂಧ್ರ ಪ್ರದೇಶದ ಅತ್ಯಂತ ಪ್ರಾಚೀನವಾದ ನಾಡು ಅಲ್ಲಿ ಹಲವಾರು ಸಮುದಾಯಗಳಿದ್ದು ಅವುಗಳಲ್ಲಿ ಒಂದು ಸಮುದಾಯದ ಹೆಸರು "ಕಮ್ಮೆಗಳು". ಬಚ್ಚುಪಲ್ಲಿ ಎಂಬ ಪಟ್ಟಣದಲ್ಲಿದ್ದ ಒಂದು ಗುಂಪು ವ್ಯಾಪಾರ, ಉದ್ಯೋಗ, ವಿದ್ಯಾಭ್ಯಾಸ ಮುಂತಾದ ಕಾರಣಗಳಿಂದ ಕನ್ನಡನಾಡಿಗೆ ಆಗಮಿಸಿ ಶಿವಮೊಗ್ಗ, ಚಿತ್ರದುರ್ಗ, ಚಿಕ್ಕಮಗಳೂರು, ತುಮಕೂರು, ಮೈಸೂರು ಮತ್ತು ತಮಿಳುನಾಡಿನ ಕೊಯಮತ್ತೂರಿನಲ್ಲಿ ನೆಲೆಸಿತು. ಬಚ್ಚುಪಲ್ಲಿ ಎನ್ನುವ ಹೆಸರು ಕ್ರಮೇಣ ಒಬ್ಬೂರಾಗಿ ಮಾರ್ಪಟ್ಟು, ಕಮ್ಮೆನಾಡಿನಿಂದ ಬಂದವರಾದ್ದರಿಂದ, ಆ ಸಮುದಾಯ 'ಬಬ್ಬೂರು ಕಮ್ಮೆ' ಸಮುದಾಯ ಎನ್ನುವ ಹೆಸರು ಪಡೆಯಿತು.

ಒಂದನೆಯ ಶತಮಾನದಿಂದ ಇಂದಿನವರೆಗೆ 'ಬಬ್ಬೂರುಕಮ್ಮೆ' ಸಮುದಾಯದ ಹಲವಾರು ಪ್ರಮುಖ ಸಾಹಿತ್ಯ ಸಾಧಕರನ್ನು ಉಲ್ಲೇಖಿಸ ಬಹುದು. ಕನ್ನಡದ ಆದಿಕವಿ ಎನ್ನುವ ಹೆಗ್ಗಳಿಕೆಗೆ ಪಾತ್ರನಾದ ಪಂಪ, (ಕ್ರಿ.ಶ. ೯೪೧) 'ಪಂಚತಂತ್ರ'ವೆಂಬ ಚಂಪೂಕಾವ್ಯವನ್ನು ಕನ್ನಡದಲ್ಲಿ ರಚಿಸಿದ ದುರ್ಗಸಿಂಹ, (೧೦೨೫) 'ಯಶೋಧರ ಚರಿತ್ರೆ'ಯನ್ನು ರಚಿಸಿದ ಕವಿಚಕ್ರವರ್ತಿ ಜನ್ನ (೧೨೦೯), ವೀರಶೈವ ಮತವನ್ನು ಪುನರುದ್ಧರಿಸಿ ವೇದಾಂತದ ಸಾರವನ್ನು ವಚನಗಳ ಮೂಲಕ ಜನಸಾಮಾನ್ಯರಿಗೆ ಅರ್ಥವಾಗುವಂತೆ ಉಣಬಡಿಸಿದ ಶ್ರೀ ಬಸವೇಶ್ವರ, (೧೨ನೇ ಶತಮಾನ) ವಿಜಯನಗರ ಸಾಮ್ರಾಜ್ಯದ ಪ್ರತಿಷ್ಠಾಪಕ ಶ್ರೀ ವಿದ್ಯಾರಣ್ಯ, ಶೃಂಗೇರಿಮಠದ ಪೀಠಾಧ್ಯಕ್ಷರಾಗಿದ್ದ ಭಾರತೀ ಕೃಷ್ಣತೀರ್ಥರು, (೧೩೮೦ -೧೩೮೯) 'ಅಭಿನಯ ನಿಘಂಟು' ರಚಿಸಿದ ಅಭಿನವ ಮಂಗರಾಜ, ಆಧ್ಯಾತ್ಮ ಲೋಕದ ಧ್ರುವತಾರೆಯಾಗಿ ೧೮೮೦ ರಿಂದ ೧೯೭೫ ರವರಿಗೆ ಜೀವಿಸಿದ್ದು ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಆದಿಶಂಕರಾಚಾರ್ಯರ ಕೃತಿಗಳನ್ನು

ಭಾಷಾಂತರಿಸಿ ಮಹೋಪಕಾರ ಮಾಡಿದ ಶ್ರೀಶ್ರೀಶ್ರೀ ಸಚ್ಚಿದಾನಂದೇಂದ್ರ ಸ್ವಾಮಿಗಳು, ಹಾಗೂ ಆಚಾರ್ಯ ಕನ್ನಡದ ಕಣ್ವರೆಂದೇ ಖ್ಯಾತರಾದ ಕನ್ನಡ ನವೋದಯ ಕಾವ್ಯದ ನಾಂದಿ ಹಾಡಿದ ಬಿ.ಎಂ.ಶ್ರೀಕಂಠಯ್ಯನವರು – (೧೮೮೪ – ೧೯೪೬) ಈ ಮಹನೀಯರೆಲ್ಲ 'ಬಬ್ಬೂರು ಕಮ್ಮೆ' ಎಂಬ ಸ್ಮಾರ್ತ ಬ್ರಾಹ್ಮಣ ಸಮುದಾಯಕ್ಕೆ ಸೇರಿದವರು.

ಹದಿನೆಂಟನೆಯ ಶತಮಾನದ ಆದಿಯಲ್ಲಿ ಮೂರು ತಲೆಮಾರಿನ ಹಿಂದಿನ ಬಬ್ಬೂರುಕಮ್ಮೆ ಸಮುದಾಯದ ಕುಟುಂಬವೊಂದು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ 'ಮಾಧವಪುರಿ' ಎಂಬ ಗ್ರಾಮದಲ್ಲಿ ವಾಸವಾಗಿತ್ತು. ಇಂದಿನ ಬೆಳ್ಳೂರು ಗ್ರಾಮಕ್ಕೆ ಹಿಂದೆ ಮಾಧವಪುರಿ ಎನ್ನುವ ಹೆಸರಿತ್ತು ಎನ್ನುವ ಸತ್ಯ ಶಾಸನದ ಆಧಾರದ ಮೇಲೆ ತಿಳಿದು ಬರುತ್ತದೆ. ಆ ಕುಟುಂಬಕ್ಕೆ ಜೋಡಿದಾರಿಕೆಯಿದ್ದು ಮನೆ, ಹೊಲ, ತೋಟ ಮುಂತಾದ ಆಸ್ತಿಯಿತ್ತು.

ಆ ಕುಟುಂಬದ ಸದಸ್ಯರಲ್ಲಿ ಒಬ್ಬರಾಗಿದ್ದ ಬೆಳ್ಳೂರು ಮೈಲಾರಯ್ಯ ಶ್ರೀರಂಗಪಟ್ಟಣದಲ್ಲಿ ವಕೀಲರಾಗಿದ್ದರು. ಅವರ ಪತ್ನಿಯ ಹೆಸರು ಭಾಗೀರಥಮ್ಮ. ಆಕೆ ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೋಕಿನ ಸಂಪಿಗೆ ಗ್ರಾಮದ ಜೋಡಿದಾರರಾಗಿದ್ದ ಮಲ್ಲಣ್ಣನವರ ಎರಡನೆಯ ಮಗಳು. ಅವರಿಗೂ ಸ್ವಂತಮನೆ, ತೋಟ, ಜಮೀನಿದ್ದು ಅನುಕೂಲ ಸ್ಥಿತಿಯಲ್ಲಿದ್ದರು.

ಭಾಗೀರಥಮ್ಮ ಚೊಚ್ಚಲು ಗರ್ಭಿಣಿಯಾದಾಗ ಮೊದಲನೆಯ ಹೆರಿಗೆ ತವರು ಮನೆಯಲ್ಲಾಗಬೇಕು ಎನ್ನುವ ಆ ಕಾಲದ ವಿಪ್ರ ಸಮುದಾಯದ ಸಂಪ್ರದಾಯಕ್ಕೆ ಅನುಗುಣವಾಗಿ ಆಕೆ ಸಂಪಿಗೆಗೆ ಪ್ರಯಾಣ ಮಾಡಿದರು.

೧೮೮೪ ನೆಯ ಇಸವಿ ಜನವರಿ ತಿಂಗಳು ಮೂರನೆಯ ತಾರೀಖು ಭಾಗೀರಥಮ್ಮನಿಗೆ ಗಂಡುಮಗುವಾಯಿತು. ಹುಣ್ಣಿಮೆಯ ಚಂದ್ರನಂತೆ ಬೆಳ್ಳಗೆ ಸುಂದರವಾಗಿದ್ದ ಮಗುವಿಗೆ ಹಿರಿಯರು 'ಶ್ರೀಕಂಠ' ಎಂದು ನಾಮಕರಣ ಮಾಡಿದರು. ಅದಕ್ಕೆ ಕಾರಣ ಮೈಲಾರಯ್ಯನವರ ಮನೆದೇವರು ನಂಜನಗೂಡಿನ ನಂಜುಂಡೇಶ್ವರ (ಶ್ರೀಕಂಠೇಶ್ವರ) ಆ ಕುಟುಂಬದಲ್ಲಿ ಜನಿಸುವ ಮೊದಲನೆಯ ಗಂಡುಮಗುವಿಗೆ 'ಶ್ರೀಕಂಠ' ಎಂದು ಹೆಸರನ್ನಿಡುವ ಪದ್ಧತಿಯಿತ್ತು. ಭಾಗೀರಥಮ್ಮ ತೌರು ಮನೆಯಲ್ಲಿ ಒಂದು ವರ್ಷ ವಿಶ್ರಾಂತಿ ಪಡೆದು ಶ್ರೀರಂಗಪಟ್ಟಣದಲ್ಲಿದ್ದ ಅತ್ತೆ ಮನೆಗೆ ಮಗುವಿನೊಂದಿಗೆ ಹಿಂತಿರುಗಿದರು. ರಾಮಾಶಾಸ್ತ್ರಿಗಳ ಪೌರೋಹಿತ್ಯದ ಸಾರಥ್ಯದಲ್ಲಿ ಮಗುವಿನ ಒಂದು ವರ್ಷದ ಹುಟ್ಟಿದ ಹಬ್ಬ ವಿಜೃಂಭಣೆಯಿಂದ ನಡೆಯಿತು.

ಸಮಾರಂಭಕ್ಕೆ ಸುಮಾರು ಐವತ್ತು ಮಂದಿ ಬ್ರಾಹ್ಮಣ ಕುಟುಂಬದವರನ್ನು ವಿಶೇಷ ಔತಣಕ್ಕೆ ಆಹ್ವಾನಿಸಿದ್ದರು. ಅಂದಿನ ಕಾಲದಲ್ಲಿ ಬ್ರಾಹ್ಮಣರ ಮನೆಗಳಲ್ಲಿ ನಡೆಯುತ್ತಿದ್ದ ಮದುವೆ, ಮುಂಜಿ, ನಾಮಕರಣ, ಚೌಲ, ಇತ್ಯಾದಿ ಸಮಾರಂಭಗಳಿಗೆ ಬ್ರಾಹ್ಮಣೇತರರನ್ನು ಆಹ್ವಾನಿಸುತ್ತಿರಲಿಲ್ಲ. ಆದರೆ ಮಾರನೆಯ ದಿನ ಸಂಜೆ ಅವರನ್ನೆಲ್ಲ ಪ್ರಾಸಂಗಿಕವಾಗಿ ಬರಮಾಡಿಕೊಂಡು ಹೂವು, ರಸಬಾಳೆ, ಚಕ್ಕುಲಿ, ಬೆಲ್ಲದ ಪುರಿ ಉಂಡೆಗಳು ಹಾಗೂ ತಾಂಬೂಲಗಳನ್ನು ನೀಡಿ ಗೌರವದಿಂದ ಬೀಳ್ಕೊಡಲಾಗುತ್ತಿತ್ತು.

ಭಾಗೀರಥಮ್ಮನಿಗೆ ಮೂರು ವರ್ಷಗಳ ನಂತರ ತೌರೂರಿನಲ್ಲೆ ಹೆಣ್ಣುಮಗು ವಾಯಿತು. ಮಗುವಿಗೆ 'ನಂಜಮ್ಮ' ಎಂದು ನಾಮಕರಣ ಮಾಡಿದರು. ಅನಂತರ ಜನಿಸಿದವರು ಶಿವರಾಮು, ಕಾವೇರಿ ಮತ್ತು ಕೃಷ್ಣಸ್ವಾಮಿ.

ಮೂರು ವರ್ಷದ ಶ್ರೀಕಂಠ ವಿಪರೀತ ತುಂಟನಾಗಿದ್ದ. ಅವನನ್ನು ಸುಧಾರಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಅವನಿಗೆ ಐದು ವರ್ಷಗಳು ತುಂಬಿದಾಗ ತಂದೆ ಮಗನಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಬೋಧಿಸಲು ಒಬ್ಬ ಅಧ್ಯಾಪಕರನ್ನು ಗೊತ್ತು ಮಾಡಿದರು. ಶ್ರೀಕಂಠ ಆ ಭಾಷೆಗಳನ್ನು ಬಹುಬೇಗ ಕಲಿತುಕೊಂಡರೂ ತನ್ನ ತುಂಟುತನದ ನಡವಳಿಕೆಗೆ ಲಗಾಮು ಹಾಕಲಿಲ್ಲ. ಮಗನ ತುಂಟುತನದ ಪ್ರಕರಣಗಳನ್ನು ಮೈಲಾರಯ್ಯನವರ ಹತ್ತಿರ ಅಧ್ಯಾಪಕರು ವರದಿ ಮಾಡಿದಾಗಲೆಲ್ಲ ಶ್ರೀಕಂಠನಿಗೆ ಬೆತ್ತದ ಸೇವೆಯಾಗುತ್ತಿತ್ತು. ಆದರೆ ಏಟು ತಿಂದ ಅವನು ನಗುತ್ತಾ ಓಡಿ ಬಿಡುತ್ತಿದ್ದ.

ಆರುವರ್ಷದ ಶ್ರೀಕಂಠನನ್ನು ತಂದೆ ಸರ್ಕಾರಿ ಪ್ರಾಥಮಿಕ ಶಾಲೆಗೆ ಸೇರಿಸಿದರು. ಉಪಾಧ್ಯಾಯರು ಹೇಳಿಕೊಟ್ಟಿದ್ದನ್ನೆಲ್ಲಾ ಚೆನ್ನಾಗಿ ಕಲಿತರೂ ಸಮ ವಯಸ್ಸಿನ ಕೆಲವು ತುಂಟ ಹುಡುಗರ ಗುಂಪಿಗೆ ನಾಯಕನೆನಿಸಿಕೊಂಡ. ಸುಬ್ಬರಾವ್, ಅಪ್ಪಾಜಿರಾವ್, ವೆಂಟಕಸುಬ್ಬರಾವ್, ವರದಾಚಾರ್, ನರಸಿಂಹಯ್ಯ ಆ ಗುಂಪಿನಲ್ಲಿದ್ದ ಕೆಲವು ಹುಡುಗರು. ಆ ಗುಂಪು ವಾರಕ್ಕೆರಡು ಮೂರು ದಿನ ಶಾಲೆಗೆ ಹೋಗದೆ ಊರಿನ ಹೊರಭಾಗದಲ್ಲಿದ್ದ ಬಾಳೆ, ಮಾವು, ಸೀಬೆ, ಅಂಜೂರ ಮುಂತಾದ ಹಣ್ಣುಗಳ ತೋಟದಲ್ಲಿ ಸುತ್ತಾಡಿ, ತೋಟದ ಮಾಲೀಕರ ಕೈಗೆ ಸಿಕ್ಕಿಬೀಳದಂತೆ ಎಚ್ಚರಿಕೆ ವಹಿಸಿ ಹಣ್ಣುಗಳನ್ನು ಕಿತ್ತು ತಿನ್ನುತ್ತಿತ್ತು. ಆ ಗುಂಪಿನ ನಾಯಕ ಶ್ರೀಕಂಠನಾಗಿದ್ದ. ಅದಕ್ಕೆ ಕಾರಣ ಅವನು ವಯಸ್ಸಿನಲ್ಲಿ, ಗಾತ್ರದಲ್ಲಿ ಇತರರಿಗಿಂತ ಹಿರಿಯನಾಗಿದ್ದ ಎಲ್ಲರೂ ಅವನನ್ನು 'ಮಂಡ ಮಾಮ'

ಎಂಬ ಅಡ್ಡ ಹೆಸರಿನಿಂದ ಕರೆಯುತ್ತಿದ್ದರು.

ಒಂದು ದಿನ ಕೆಲವು ಹುಡುಗರು ದೇವಸ್ಥಾನದ ಎದುರಿನಲ್ಲಿದ್ದ ವಿಶಾಲವಾದ ಬಯಲಿನಲ್ಲಿ ಗುಂಡಿ ತೋಡಿ ಅದರಲ್ಲಿ ಕತ್ತಿನವರೆಗೆ ಶ್ರೀಕಂಠನನ್ನು ಹೂಳಿ 'ಪುಂಡಮಾವ, ನೀನು ನಮ್ಮ ನಾಯಕ, ನೀನೇ ನಮಗೆ ದೇವರು, ಅಂಗಡಿಗೆ ಹೋಗಿ ಹೂವು ಹಣ್ಣು ತಂದು ನಿನಗೆ ಪೂಜೆ ಮಾಡುತ್ತೇವೆ' ಎಂದು ಹೇಳಿ ಗುಂಡಿಯಲ್ಲಿ ಅವನನ್ನು ಒಂಟಿಯಾಗಿ ಬಿಟ್ಟು ಹೋದರು. ಮಣ್ಣಿನಲ್ಲಿ ಹೂಳಲ್ಪಟ್ಟ ಶ್ರೀಕಂಠನಿಗೆ ಉಸಿರಾಟದ ತೊಂದರೆಯಾಗಿ ಚಡಪಡಿಸುತ್ತಾ 'ಕಾಪಾಡಿ, ಕಾಪಾಡಿ' ಎಂದು ಕೂಗಿಕೊಂಡ. ರಸ್ತೆಯಲ್ಲಿ ಓಡಾಡುತ್ತಿದ್ದ ಕೆಲವರು ಕೂಗು ಕೇಳಿ ಓಡಿಬಂದು ಅವನ ಅವಸ್ಥೆಯನ್ನು ಕಂಡು ಹಳ್ಳದಿಂದ ಹೊರಗೆಳೆದು ರಕ್ಷಿಸಿದರು. ಹಣ್ಣು ಹೂವಿನೊಂದಿಗೆ ಹಿಂತಿರುಗಿದ ಸ್ನೇಹಿತರು ಶ್ರೀಕಂಠನ ಸ್ಥಿತಿಕಂಡು ಭಯದಿಂದ ಅಳತೊಡಗಿದರು. ಆದರೆ ಶ್ರೀಕಂಠನೇ ಚೇತರಿಸಿಕೊಂಡು ಅವರನ್ನೆಲ್ಲ ಸಮಾಧಾನಮಾಡಿ ತಂದಿದ್ದ ಹಣ್ಣನ್ನು ತಿಂದು ಸಂತೋಷಪಟ್ಟ.

ಶ್ರೀಕಂಠ ಸಾಯಂಕಾಲ ಕಾವೇರಿ ನದಿಯಲ್ಲಿ ತೃಪ್ತಿಯಾಗುವವರೆಗೆ ಈಜಿ ಮನೆಗೆ ಹಿಂತಿರುಗುತ್ತಿದ್ದ. ಭಾನುವಾರ ಹಾಗೂ ರಜಾದಿನಗಳಲ್ಲಿ ಸ್ನೇಹಿತರೊಡನೆ ಟಿಪ್ಪುವಿನ ಹಾಳುಬಿದ್ದ ನೆಲಮಾಳಿಗೆಯ ಶೋಧನಾಕಾರ್ಯದಲ್ಲಿ ಮೈಮರೆಯುತ್ತಿದ್ದ. ಶಾಲೆಗೆ ಹೋಗುವುದು, ತರಗತಿಯಲ್ಲಿ ಮಾತನಾಡದೆ ಕುಳಿತುಕೊಳ್ಳುವುದೆಂದರೆ ಅವನಿಗೆ ಬೇಸರ ಶಾಲೆಯ ಶಿಸ್ತಿನ ವಾತಾವರಣವನ್ನು ದ್ವೇಷಿಸುತ್ತಿದ್ದ ಶಾಲೆಗೆ ಹೋಗುತ್ತೇನೆಂದು ಮನೆಯಲ್ಲಿ ಸುಳ್ಳು ಹೇಳಿ ಊರೆಲ್ಲಾ ಅಡ್ಡಾಡಿ ಸಂಜೆ ಇತರ ಹುಡುಗರೊಂದಿಗೆ ಮನೆಗೆ ಹಿಂತಿರುಗುತ್ತಿದ್ದ.

ಮೈಲಾರಯ್ಯನವರಿಗೆ ಮಗ ಶಾಲೆಗೆ ಹೋಗುತ್ತಿಲ್ಲ, ವಿದ್ಯಾಭ್ಯಾಸದಲ್ಲಿ ಅವನಿಗೆ ಆಸಕ್ತಿಯಿಲ್ಲ ಎನ್ನುವ ವಿಷಯ ತಿಳಿದು ಚಿಂತೆಯಾಯಿತು. ಶಾಲೆಗೆ ತಪ್ಪದೆ ಹೋಗುವಂತೆ ಬುದ್ಧಿ ಮಾತು ಹೇಳಿದರು. ಬೈದರು, ನಾಲ್ಕು ಏಟು ಹಾಕಿದರು. ಆದರೆ ಯಾವುದೂ ಪ್ರಯೋಜನವಾಗಲಿಲ್ಲ.

"ನೀನೇಕೆ ಶಾಲೆಗೆ ಹೋಗುತ್ತಿಲ್ಲ?" ಎಂದು ತಂದೆ ಮಗನನ್ನು ಕೇಳಿದರು.

"ದಿನವೂ ಶಾಲೆಗೆ ಹೋಗುವುದು, ಮೇಸ್ಟರು ಹೇಳುವುದನ್ನೆಲ್ಲ ಸಂಜೆಯವರೆಗೂ ತರಗತಿಯಲ್ಲಿ ಕುಳಿತು ಕೇಳಿಸಿಕೊಳ್ಳುವುದು ನನ್ನಿಂದ ಸಾಧ್ಯವಿಲ್ಲ. ತುಂಬ ಬೇಸರವಾಗುತ್ತದೆ. ದಿನವೆಲ್ಲ ಹೊರಗೆ ಸುತ್ತಾಡಿ ಗಿಡ, ಮರ, ನದಿ, ಹಣ್ಣು, ಹೂವುಗಳನ್ನು ನೋಡಿ ಸಂತೋಷಪಡುವುದೆಂದರೆ ನನಗೆ ತುಂಬ

ಇಷ್ಟ" ಎಂದ ಶ್ರೀಕಂಠ.

"ಮೈಲಾರಯ್ಯ ಮಗನ ಮನಸ್ಸನ್ನು ವಿದ್ಯಾಭ್ಯಾಸದ ಕಡೆಗೆ ತಿರುಗಿಸಲು ಒಂದು ಉಪಾಯ ಮಾಡಿದರು. ಲೆಕ್ಕ, ಚರಿತ್ರೆ, ಭೂಗೋಳದ ಶಿಕ್ಷಕರನ್ನು ಮನೆಗೇ ಬಂದು ಬೋಧಿಸುವಂತೆ ಗೊತ್ತು ಮಾಡಿದರು. ಆ ವಿಷಯಗಳ ಕಲಿಕೆಯಲ್ಲಿ ಆಸಕ್ತಿಯಿಲ್ಲದ ಶ್ರೀಕಂಠ ಅವರು ಪಾಠಕ್ಕೆ ಬರುವ ಸಮಯದಲ್ಲಿ ಮನೆಯಿಂದ ಪರಾರಿಯಾಗುತ್ತಿದ್ದ.

ಒಂದು ದಿನ ಶಾಲೆಯ ಮುಖ್ಯೋಪಾಧ್ಯಾಯರು ಮನೆಗೆ ಬಂದು 'ಈ ಸಲ ನಾಲ್ಕನೆಯ ತರಗತಿಯ ಎಂಟು ಹುಡುಗರನ್ನು ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಗೆ ಕಟ್ಟಿಸಬೇಕೆಂದಿದ್ದೇನೆ. ಶ್ರೀಕಂಠನನ್ನು ದಿನವೂ ಶಾಲೆಗೆ ಕಳುಹಿಸಿ. ಅವನನ್ನೂ ಕಟ್ಟಿಸಿಬಿಡೋಣ' ಎಂದು ಮೈಲಾರಯ್ಯನವರಿಗೆ ಹೇಳಿದರು.

"ಅವನು ಶಾಲೆಗೆ ಸರಿಯಾಗಿ ಹೋಗುತ್ತಿಲ್ಲ ಎನ್ನುವುದು ನನಗೂ ಗೊತ್ತಿದೆ. ಮನೆ ಪಾಠಕ್ಕೂ ತಪ್ಪಿಸಿಕೊಳ್ಳುತ್ತಿದ್ದಾನೆ. ಒಳ್ಳೆ ಮಾತಿನಲ್ಲಿ ಬುದ್ದಿ ಹೇಳಿದೆ. ಬೈದೆ, ನಾಲ್ಕು ಏಟು ಕೊಟ್ಟಾಯ್ತು. ಈ ಜನ್ಮದಲ್ಲಿ ಅವನು ದಾರಿಗೆ ಬರುವಂತೆ ನನಗೆ ಕಾಣುತ್ತಿಲ್ಲ. ಮೇಷ್ಟ್ರೆ, ಒಂದು ತಿಂಗಳು ಅವನನ್ನು ನಿಮ್ಮ ಮನೆಯಲ್ಲಿಟ್ಟುಕೊಂಡು ಪಾಠ ಹೇಳಿ ಪರೀಕ್ಷೆಗೆ ತಯಾರು ಮಾಡಿ. ನಾನಿನ್ನೇನೂ ಮಾಡಲಾರೆ" ಎಂದರು ಮೈಲಾರಯ್ಯ.

ಮಾರನೆಯ ದಿನ ಮೇಷ್ಟ್ರರು 'ನೀನು ತುಂಬ ಬುದ್ದಿವಂತ ಶಾಲೆಗೆ, ಮನೆಪಾಠಕ್ಕೆ ತಪ್ಪಿಸಿಕ್ಕೊಳ್ಳಬೇಡ. ಪರೀಕ್ಷೆಗೆ ಎರಡು ತಿಂಗಳಿದೆ. ಓದುವುದರ ಕಡೆ ಗಮನ ಕೊಡು ಖಂಡಿತ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತೀಯ. ಅದರಿಂದ ನಿಮ್ಮ ತಂದೆ ತಾಯಿಗೂ ಸಂತೋಷವಾಗುತ್ತೆ ಎಂದು ಶ್ರೀಕಂಠನಿಗೆ ಬುದ್ದಿವಾದ ಹೇಳಿದರು. ಅವರ ಮಾತನ್ನು ಕೇಳಿಸಿಕೊಂಡರೂ ಅವರು ಹೇಳಿದಂತೆ ನಡೆದುಕೊಳ್ಳಲಿಲ್ಲ. ವ್ಯಾಸಂಗದಲ್ಲಿ ಆಸಕ್ತಿ ವಹಿಸಲಿಲ್ಲ. ಮೇಷ್ಟ್ರರು ಮೂರು ರೂಪಾಯಿ ಪಡೆದು ಶ್ರೀಕಂಠನನ್ನು ಲೋಯರ್ ಸೆಕೆಂಡರಿ ಪರೀಕ್ಷೆಗೆ ಕಟ್ಟಿಸಿದರು.

ಪರೀಕ್ಷೆ ಪ್ರಾರಂಭವಾಯಿತು. ಮೊದಲನೆಯ ದಿನ ಶ್ರೀಕಂಠ ತಾಯಿಯ ಬಲವಂತಕ್ಕೆ ಬೇಗ ಎದ್ದು ತಿಂಡಿ ತಿಂದು ಶಾಲೆಗೆ ಹೋದ.

ಸಂಜೆ ಮನೆಗೆ ಹಿಂತಿರುಗಿದ ಮಗನನ್ನು ತಂದೆ ಕೇಳಿದರು

"ಪರೀಕ್ಷೆಯಲ್ಲಿ ಹೇಗೆ ಮಾಡಿದ್ದೀಯ ಮಗು?"

"ತುಂಬ ಚೆನ್ನಾಗಿ ಮಾಡಿದ್ದೀನಿ, ಫಸ್ಟ್ ಕ್ಲಾಸಿನಲ್ಲಿ ಪಾಸಾಗುತ್ತೆ"

ಎಂದುತ್ತರಿಸಿದ ಗೆಲುವಿನ ಧ್ವನಿಯಿಂದ ಶ್ರೀಕಂಠ.

ಮಾರನೆಯ ದಿನವೂ ಸಮಯಕ್ಕೆ ಸರಿಯಾಗಿ ಪರೀಕ್ಷೆಗೆ ಹೋಗಿ ಬಂದ. ಮೂರನೆಯ ದಿನ ಪರೀಕ್ಷೆಗೆ ಹೋದರೂ ಸಾಯಂಕಾಲ ಏಳು ಘಂಟೆಯಾದರೂ ಮನೆಗೆ ಹಿಂತಿರುಗಲಿಲ್ಲ. ಭಾಗೀರಥಮ್ಮ ಗಾಬರಿಯಾದರು. ಪಕ್ಕದ ಮನೆ ರಾಮು 'ಇವತ್ತು ಶ್ರೀಕಂಠ ಪರೀಕ್ಷೆಗೆ ಬಂದಿರಲಿಲ್ಲ' ಎಂದು ಹೇಳಿದಾಗ ಆಕೆ ಹೆದರಿ ಕಂಗಾಲಾಗಿ ಕಣ್ಣೀರಿಟ್ಟರು.

"ನೀನ್ಯಾಕೆ ಅಳ್ತಿದೀಯ, ಸಮಾಧಾನ ಮಾಡ್ಕೊ. ಅವನು ಇನ್ನೆಲ್ಲಿಗೆ ಹೋಗ್ತಾನೆ? ರಾತ್ರಿ ಊಟಕ್ಕಾದ್ರೂ ಮನೆಗೆ ಬಂದೇ ಬರ್ತಾನೆ?" ಎಂದು ಮೈಲಾರಯ್ಯ ಪತ್ನಿಗೆ ಸಮಾಧಾನದ ಮಾತುಗಳನ್ನಾಡಿದರು. ಆದರೆ ಆ ರಾತ್ರಿ ಅವನು ಮನೆಗೆ ಬರಲಿಲ್ಲ.

ಮಾರನೆಯ ದಿನ ಮೈಲಾರಯ್ಯ ಕೋರ್ಟಿಗೆ ಹೋದ ಮೇಲೆ ಶ್ರೀಕಂಠ ಮನೆಗೆ ಬಂದಾಗ 'ಯಾಕೊ ಮಗು, ನಿನ್ನೆ ನೀನು ಪರೀಕ್ಷೆಗೆ ಹೋಗಿರಲಿಲ್ವಂತೆ' ಎಂದು ತಾಯಿ ಕೇಳಿದರು.

"ಹೌದು, ಪರೀಕ್ಷೆಗೆ ಹೋಗಲಿಲ್ಲ ಯಾಕೆಂದರೆ ಮೂರು ಗಂಟೆ ಕುಳಿತು ಬರೆಯೋದು ನನಗೆ ಬೇಸರ."

"ರಾತ್ರಿ ಮನೆಗೂ ಬರಲಿಲ್ಲ, ಎಲ್ಲಿದ್ದೆ? ಊಟಕ್ಕೇನು ಮಾಡಿದೆ? ಒಂದು ರಾತ್ರಿಯೂ ನೀನು ಉಪವಾಸ ಮಾಡಿದವನಲ್ಲ?"

"ಗುಡಿ ಪೂಜಾರಿ ತಮ್ಮಯ್ಯ ಒಂದು ಬಾಳೆಹಣ್ಣು, ಎರಡು ತೆಂಗಿನಕಾಯಿ ಚೂರು ಕೊಟ್ಟ, ತಿಂದು ಹೊಟ್ಟೆ ತುಂಬ ನೀರು ಕುಡಿದು ದೇವಸ್ಥಾನದ ತೇರಿನ ಮೇಲೆ ಮಲಗಿದೆ, ನಿಶ್ಯಬ್ದ ವಾತಾವರಣ, ತಂಪಾದ ಗಾಳಿ, ತುಂಬಾ ಚೆನ್ನಾಗಿತ್ತು, ನಿದ್ರೆ ಮಾಡಿದೆ. ದಿನವೂ ಅಲ್ಲೇ ಹೋಗಿ ಮಲಗೋಣ ಅನ್ನಿಸ್ತಿದೆ" ಎಂದು ಶ್ರೀಕಂಠ ತಾಯಿ ತಟ್ಟೆ ತುಂಬ ಕೊಟ್ಟ ಉಪ್ಪಿಟ್ಟು ತಿಂದು ಕೈತೊಳೆದು ಗೆಳೆಯರನ್ನು ಹುಡುಕಿಕೊಂಡು ಮನೆಯಿಂದ ಹೊರಬಿದ್ದ.

ಆ ವರ್ಷ ಅವನಿಗೆ ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲ. ಮಗನ ಪರೀಕ್ಷೆಯ ಫಲಿತಾಂಶದ ಬಗ್ಗೆ ನಿರೀಕ್ಷೆಯನ್ನಿಟ್ಟುಕೊಳ್ಳದಿದ್ದ ಮನೆಯವರಿಗೆ ನಿರಾಶೆಯಾಗಲಿಲ್ಲ.

ಹಲವಾರು ವರ್ಷಗಳ ನಂತರ ಕಾಲೇಜಿನ ಅಧ್ಯಾಪಕರಾಗಿದ್ದ ಶ್ರೀಕಂಠಯ್ಯ ವಿದ್ಯಾರ್ಥಿಗಳಿಗೆ ಪಾಠ ಮಾಡುವ ಸಂದರ್ಭದಲ್ಲಿ 'ನನಗೆ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿಲ್ಲ' ಎಂದು ಹೇಳುತ್ತಿದ್ದರಂತೆ!

ಶ್ರೀಕಂಠನ ತುಂಟಾಟಗಳಿಗೆ ಇತಿಮಿತಿಯಿರಲಿಲ್ಲ. ನಿರಾತಂಕವಾಗಿ

ಮುಂದುವರೆದವು. ಒಮ್ಮೆ ವೈಸರಾಯರು ಬೆಂಗಳೂರಿನಿಂದ ಮೈಸೂರಿಗೆ ಕಾರಿನಲ್ಲಿ ಪ್ರಯಾಣ ಮಾಡಬೇಕಾಗಿತ್ತು. ಶ್ರೀರಂಗಪಟ್ಟಣ ಹಾದು ಹೋಗುವಾಗ ಅವರನ್ನು ಸ್ವಾಗತಿಸಿ ಸನ್ಮಾನಿಸಿ ಬೀಳ್ಕೊಡಬೇಕೆಂದು ಊರಿನವರು ನಿಶ್ಚಯಿಸಿ ನಾಲ್ಕು ರಸ್ತೆಗಳು ಸೇರುವ ಜಾಗದಲ್ಲಿ ಒಂದು ಅಲಂಕೃತ ವೇದಿಕೆಯನ್ನು ನಿರ್ಮಿಸಿದರು. ಹಸಿರು ಚಪ್ಪರ ಸಿದ್ಧವಾಯಿತು. ಮಾರನೆಯ ದಿನ ವೈಸರಾಯ್ ಬರುವವರಿದ್ದರು. ಹಿಂದಿನ ದಿನ ರಾತ್ರಿ ಶ್ರೀಕಂಠ ಗೆಳೆಯರ ಸಹಾಯದಿಂದ ವೇದಿಕೆ, ಚಪ್ಪರವನ್ನೆಲ್ಲಾ ಧ್ವಂಸಮಾಡಿ ಹೂವು, ತೋರಣಗಳನ್ನೆಲ್ಲ ಕಿತ್ತು ಯಾರಿಗೂ ಕಾಣಿಸದಂತೆ ಹಾಳುಭಾವಿಯಲ್ಲಿ ಬಿಸಾಡಿದ. ಮಾರನೆಯ ದಿನ ಊರಿನ ಗಣ್ಯರಿಗೆ ಮಾನ ಹೋಗುವ ಸಂದರ್ಭ ಎದಿರಾಯಿತು. ಅಲ್ಪ ಸಮಯದಲ್ಲಿ ಚಪ್ಪರ, ವೇದಿಕೆ ನಿರ್ಮಿಸುವುದು ಅಸಾಧ್ಯವಾದ ಕೆಲಸವಾಗಿತ್ತು. ವೈಸರಾಯರು ಬಂದರು, ಹೋದರು. ಯಾರೂ ಅವರನ್ನು ಸ್ವಾಗತಿಸಲಿಲ್ಲ, ಸನ್ಮಾನಿಸಲಿಲ್ಲ. ಊರಿನ ಗಣ್ಯರು ಕಳ್ಳರನ್ನು ಪತ್ತೆ ಮಾಡಲು ಪ್ರಯತ್ನಿಸಿ ವಿಫಲರಾದರು.

ಯುಗಾದಿ ಹಬ್ಬ ವಾರವಿದೆ ಎನ್ನುವಾಗ ಮೈಲಾರಯ್ಯ ಮನೆಯ ಗಂಡಸರಿಗೆ ಮೈಸೂರಿನಿಂದ ಹೊಸ ಪಂಚೆ, ಕೆಂಪು ಬಣ್ಣದ ಷರಟುಗಳನ್ನು ತಂದು ಮನೆಯಲ್ಲಿಟ್ಟಿದ್ದರು. ಅವುಗಳನ್ನೆಲ್ಲ ಶ್ರೀಕಂಠ ಯಾರಿಗೂ ಗೊತ್ತಾಗದಂತೆ ಕದ್ದು ಗೆಳೆಯರ ಸಹಾಯದಿಂದ ಕತ್ತರಿಸಿ ತುಂಡುಗಳನ್ನಾಗಿ ಮಾಡಿ ಒಂದು ಬಿಳಿ, ಒಂದು ಕೆಂಪು ಬಣ್ಣದ ತುಂಡುಗಳಂತೆ ಕಟ್ಟಿ ತೋರಣ ಮಾಡಿ ಮನೆಯ ಮುಂಭಾಗದಲ್ಲಿ ಕಟ್ಟಿದ. ಆ ತುಂಟ ಕೆಲಸದ ನಾಯಕ ಶ್ರೀಕಂಠನೆಂದು ತಿಳಿದ ಮೈಲಾರಯ್ಯ ಅವನಿಗೆ ಬೆತ್ತದ ಏಟಿನ ರುಚಿಯ ಪರಿಚಯ ಮಾಡಿಸಿದರು. ದೊಡ್ಡಮ್ಮ ಅಚ್ಚಮ್ಮಣ್ಣಿಯವರಿಗೆ ಹಿರಿಯ ಮಗ ಶ್ರೀಕಂಠನಲ್ಲಿ ಪಂಚಪ್ರಾಣ ತಂದೆ ಮಗನ ನಡುವೆ ಪ್ರವೇಶಿಸಿ ಹೊಡೆತಗಳಿಂದ ಸತ್ತುಹೋಗದಂತೆ ಶ್ರೀಕಂಠನನ್ನು ಕಾಪಾಡಿದರು.

ಶ್ರೀಕಂಠ ಭೋಜನಪ್ರಿಯ, ತಿಂಡಿಪೋತ. ಅವನ ದೊಡ್ಡಮ್ಮ ಆಗಾಗ ಚಕ್ಕುಲಿ, ಕೋಡುಬಳೆ, ತಂಬಿಟ್ಟು, ಚಿಗುಳಿ, ಗುಳಿಪಾವಟೆ, ಕಜ್ಜಾಯ, ರವೆಉಂಡೆ, ಮಂಡಕ್ಕಿಪುರಿ ಮುಂತಾದ ರುಚಿ ರುಚಿಯಾದ ತಿಂಡಿಗಳನ್ನು ಮಾಡಿ ಮಕ್ಕಳ ಕೈಗೆ ಸಿಕ್ಕದಂತೆ ಅಟ್ಟದ ಮೇಲಿಡುತ್ತಿದ್ದರು. ಅವರು ಕೊಟ್ಟಾಗ ಮಕ್ಕಳು ತಿನ್ನಬೇಕಾಗಿತ್ತು. ಬಯಸಿದಾಗಲೆಲ್ಲಾ ಬಾಯಾಡಲು ದೊರಕುತ್ತಿರಲಿಲ್ಲ. ಶ್ರೀಕಂಠ ತಮ್ಮ ಶಿವರಾಮುವಿನ ಸಹಾಯದಿಂದ ತಿಂಡಿಗಳನ್ನು ಕದ್ದು ತಿಂದು ಡಬ್ಬಗಳನ್ನು ಖಾಲಿ ಮಾಡುತ್ತಿದ್ದ. ನಂತರ ಹೊಡೆತಗಳನ್ನೂ ಧಾರಾಳವಾಗಿ ತಿನ್ನುತ್ತಿದ್ದ.

ಭಾಗೀರಥಮ್ಮ ನಾಲ್ಕೈದು ಬಗೆಯ ತರಕಾರಿ ಹಾಕಿ ಸೊಗಸಾಗಿ ಅಕ್ಕಿತರಿಯ ಉಪ್ಪಿಟ್ಟನ್ನು ಮಾಡುತ್ತಿದ್ದರು. 'ಉಪ್ಪಿಟ್ಟು' ಎಂದ ಕೂಡಲೇ ಶ್ರೀಕಂಠನ ಬಾಯಿಯಲ್ಲಿ ನೀರೂರುತ್ತಿತ್ತು ಎಷ್ಟು ತಿಂದರೂ ಅವನಿಗೆ ತೃಪ್ತಿಯಾಗುತ್ತಿರಲಿಲ್ಲ. ಮತ್ತಷ್ಟು ಬೇಕು ಎಂದು ಹಠಮಾಡಿ ಹಾಕಿಸಿಕೊಂಡು ತಿನ್ನುತ್ತಿದ್ದ. ಕೆಲವೊಮ್ಮೆ ಅವನ ಹಠಮಾರಿತನದಿಂದ ಇತರರಿಗೆ ಉಪ್ಪಿಟ್ಟು ಸಾಕಾಗುತ್ತಿರಲಿಲ್ಲ. ಮಗನಿಗೆ ಬುದ್ಧಿ ಕಲಿಸಲು ಭಾಗೀರಥಮ್ಮ ಒಂದು ದಿನ ಬೆಳಗಿನ ಉಪಹಾರಕ್ಕೆ ಕೊಳದಪ್ಪಲೆಯ ತುಂಬ ಉಪ್ಪಿಟ್ಟು ಮಾಡಿ ಎಲ್ಲವನ್ನೂ ಬಾಳೆಎಲೆಯ ಮೇಲೆ ಬಡಿಸಿ, ನಾಲ್ಕು ಸೌಟು ಮೊಸರು ಸುರಿದು ಶ್ರೀಕಂಠನ ಮುಂದಿಟ್ಟು ಹೇಳಿದರು.

"ಇವತ್ತು ನಿನಗೆ ಇಷ್ಟವಾದ ಉಪ್ಪಿಟ್ಟು ಮಾಡಿ ಎಲೆಯ ಮೇಲೆ ಬಡಿಸಿದ್ದೇನೆ. ಉಪ್ಪಿಟ್ಟೆಂದರೆ ನಿನಗೆ ತುಂಬ ಇಷ್ಟ ಅಲ್ವಾ? ಚೆಲ್ಲದೆ ಎಲ್ಲವನ್ನೂ ತಿನ್ನಬೇಕು."

ಒಂದು ಕೊಳದಪ್ಪಲೆ ಉಪ್ಪಿಟ್ಟನ್ನು ಒಬ್ಬನಿಂದ ತಿನ್ನಲು ಸಾಧ್ಯವಾಗದೆ ಶ್ರೀಕಂಠ ಒದ್ದಾಡಿದ. ತಿನ್ನಲಾರ, ಚೆಲ್ಲದೆಯೂ ಇರಲಾರ. ಬಡಿಸಿದ್ದನ್ನೆಲ್ಲಾ ತಿನ್ನಲೇಬೇಕಾಗಿತ್ತು. ತಿನ್ನಲಾರದೆ ಸೋತು ತಲೆತಗ್ಗಿಸಿದ. ಅದು ಹಠದ ಸ್ವಭಾವದ ಮಗನಿಗೆ ತಾಯಿ ನೀಡಿದ ಶಿಕ್ಷೆಯಾಗಿತ್ತು. ತಾಯಿಯ ಉಪಾಯ ಫಲಿಸಿತು. ಅಂದಿನಿಂದ ಅವನು ತಾಯಿ ಕೊಟ್ಟಷ್ಟನ್ನು ತಿಂದು ತೃಪ್ತನಾಗುತ್ತಿದ್ದ. ಮತ್ತಷ್ಟು ಬೇಕು ಎಂದು ಕೇಳುತ್ತಿರಲಿಲ್ಲ.

ಶ್ರೀರಂಗಪಟ್ಟಣದಲ್ಲಿ ಪ್ರಾಥಮಿಕ, ಮಾಧ್ಯಮಿಕ ವಿದ್ಯಾಭ್ಯಾಸ ಮುಗಿಸಿದ ಶ್ರೀಕಂಠ ಪ್ರೌಢಶಾಲೆಯ ವಿದ್ಯಾಭ್ಯಾಸಕ್ಕೆ ಮೈಸೂರಿಗೆ ಹೋಗಬೇಕಾಯಿತು. ಯಾಕೆಂದರೆ ಆ ಊರಿನಲ್ಲಿ ಪ್ರೌಢಶಾಲೆಯಿರಲಿಲ್ಲ. ಮೈಸೂರಿನಲ್ಲಿ ವಿದ್ಯಾಭ್ಯಾಸ ಮುಂದುವರಿಸಲು ರೈಲಿನಲ್ಲಿ ಹೋಗಿ ಬಂದು ಮಾಡಬೇಕಾಗಿತ್ತು. ವ್ಯಾಸಂಗ ಮಾಡುವ ಮಗನಿಗೆ ಪ್ರಯಾಣದಿಂದ ಶ್ರಮ ಹಾಗೂ ಸಮಯ ವ್ಯರ್ಥವಾಗುವುದೆಂದು ಮೈಲಾರಯ್ಯ ಮೈಸೂರಿನಲ್ಲೆ ಬಾಡಿಗೆಗೆ ಒಂದು ಕೊಠಡಿಯನ್ನು ಪಡೆದು ಸಮೀಪದಲ್ಲಿದ್ದ ಭೋಜನಮಂದಿರದಲ್ಲಿ ಊಟಕ್ಕೆ ವ್ಯವಸ್ಥೆ ಮಾಡಿ ಮಾಲೀಕನಿಗೆ ಮುಂಗಡವಾಗಿ ಹಣಕೊಟ್ಟು ಮಗನನ್ನು ಶಾಲೆಗೆ ಸೇರಿಸಿ ಮೈಸೂರಿನಲ್ಲಿ ಬಿಟ್ಟು ಊರಿಗೆ ಹಿಂತಿರುಗಿದರು.

ಒಂದು ವಾರದ ನಂತರ ಮಗನ ಯೋಗಕ್ಷೇಮ ವಿಚಾರಿಸಲು ಮೈಸೂರಿಗೆ ಪ್ರಯಾಣ ಮಾಡಿ ಭೋಜನ ಮಂದಿರದ ಮಾಲೀಕನನ್ನು ಭೇಟಿ ಮಾಡಿದಾಗ ಅವನಾಡಿದ ಮಾತನ್ನು ಕೇಳಿ ಅವರಿಗೆ ಆಘಾತವಾಯಿತು. ಭೋಜನ ಮಂದಿರದ

ಮಾಲೀಕ 'ಅವತ್ತಿನಿಂದ ಇವತ್ತಿನವರೆಗೆ ನಿಮ್ಮ ಮಗನ ಮುಖ ನಾನು ನೋಡಿಲ್ಲ' ಎಂದು ಹೇಳಿ ಅವರಿಂದ ಪಡೆದಿದ್ದ ಹಣವನ್ನು ಹಿಂತಿರುಗಿಸಿದ. ಮೈಲಾರಯ್ಯ ಮಗನನ್ನು ಹುಡುಕಿಸಿ 'ಹೀಗೇಕೆ ಮಾಡಿದೆ'? ಎಂದು ಪ್ರಶ್ನಿಸಿದರು.

"ದಿನವೂ ನನಗೆ ಮನೆಯಲ್ಲೆ ಊಟ ಮಾಡಿ ಅಭ್ಯಾಸ. ಭೋಜನ ಮಂದಿರದಲ್ಲಿ ಊಟ ಮಾಡಲು ಸಂಕೋಚವಾಯಿತು, ಅದಕ್ಕೆ ಹೋಗಲಿಲ್ಲ".

"ಒಂದು ವಾರ ಊಟಕ್ಕೇನು ಮಾಡಿದೆ?"

"ಜೇಬಿನಲ್ಲಿ ಪುಡಿಕಾಸಿತ್ತು. ಹಸಿವಾದಾಗಲೆಲ್ಲ ಪುರಿ, ಕಡಲೆಕಾಯಿ ತಿಂದು ನೀರು ಕುಡಿದು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದೆ" ಎಂದ ಶ್ರೀಕಂಠ. ಕೆಲವು ದಿನಗಳಲ್ಲಿ ಅವನಿಗೆ ಮೈಸೂರಿನಲ್ಲಿ ಶ್ರೀಮಂತರ ಮನೆಯಲ್ಲಿ ಊಟದ ವ್ಯವಸ್ಥೆಯಾಯಿತು. ಅವನು ತುಂಬ ಬುದ್ಧಿವಂತ ಎನ್ನುವುದು ತಿಳಿದ ಮೇಲೆ ಆ ಮನೆಯಲ್ಲೆ ವಾಸಮಾಡುವ ಅವಕಾಶವೂ ದೊರಕಿತು.

ಶ್ರೀಕಂಠ ತಂಗಿದ್ದ ಮನೆಯಲ್ಲಿದ್ದ ನಾಲ್ಕು ಬೀರುಗಳಲ್ಲಿ ಕನ್ನಡ ಮತ್ತು ಸಂಸ್ಕೃತದ ಗ್ರಂಥಗಳಿದ್ದವು. ಆ ಭಾಷೆಗಳನ್ನು ಚೆನ್ನಾಗಿ ಕಲಿತಿದ್ದುದರಿಂದ ಆ ಪುಸ್ತಕಗಳನ್ನು ಬಿಡುವಿನ ಸಮಯದಲ್ಲಿ ಓದುತ್ತಾ ಓದುವ ಹವ್ಯಾಸ ಬೆಳೆಸಿಕೊಂಡ ಆ ಹವ್ಯಾಸದಿಂದ ಸಾಹಿತ್ಯದಲ್ಲಿ ಅಪಾರವಾದ ಒಲವು ಮೂಡಿತು.

ಮೈಲಾರಯ್ಯನವರಿಗೆ ನಿಡಘಟ್ಟದಲ್ಲಿ ಗದ್ದೆ, ಹಿರೋಡೆಯಲ್ಲಿ (ಈಗ ಪಾಂಡವಪುರ) ಆರು ಎಕರೆ ಮಾವಿನ ತೋಟವಿತ್ತು. ಅದು ಅವರ ಸ್ವಾಧೀನದಲ್ಲಿದ್ದ ಪಿತ್ರಾರ್ಜಿತ ಅಸ್ತಿಯಾಗಿತ್ತು. ಒಬ್ಬ ಮುಸಲ್ಮಾನನಿಗೆ ತೋಟವನ್ನು ಗುತ್ತಿಗೆಗೆ ಕೊಟ್ಟಿದ್ದರು. ಅವನು ಪ್ರತಿ ವರ್ಷವೂ ಏಪ್ರಿಲ್ ತಿಂಗಳಲ್ಲಿ ಎಂಟನೂರು ಕಸಿ ಬಾದಾಮಿ, ಸಾವಿರ ರಸಪುರಿ ಜಾತಿಯ ಮಾವಿನ ಹಣ್ಣುಗಳನ್ನು ತಂದುಕೊಡುತ್ತಿದ್ದ. ಮೈಲಾರಯ್ಯ ಬೇಸಿಗೆಯ ರಜಾದಿನಗಳಲ್ಲಿ ಸಂಸಾರ ಸಮೇತ ಶ್ರೀರಂಗಪಟ್ಟಣದಿಂದ ಪಾಂಡವಪುರಕ್ಕೆ ಬಂದು ತಾವೇ ಕಟ್ಟಿಸಿದ್ದ ಹೆಂಚಿನ ಮನೆಯಲ್ಲಿ ವಾಸ ಮಾಡಿ ನಂತರ ಶ್ರೀರಂಗಪಟ್ಟಣಕ್ಕೆ ಹಿಂತಿರುಗುತ್ತಿದ್ದರು. ಮನೆಯ ನೆಲದ ಮೇಲೆ ಭತ್ತದ ಒಣಗಿದ ಹುಲ್ಲನ್ನು ತೆಳುವಾಗಿ ಹರಡಿ ಅದರ ಮೇಲೆ ಕಸಿ ಹಣ್ಣುಗಳನ್ನು ತೊಟ್ಟಿನ ಭಾಗ ಮೇಲ್ಭಾಗಕ್ಕೆ ಬರುವಂತೆ ಸಾಲಾಗಿ ಜೋಡಿಸಿ ಪುನಃ ಹುಲ್ಲಿನಿಂದ ಮುಚ್ಚಲಾಗುತ್ತಿತ್ತು. ಎರಡು ವಾರಗಳಲ್ಲಿ ಕಸಿಮಾವು ಹುಲ್ಲಿನ ಶಾಖಕ್ಕೆ ಹಣ್ಣಾಗುತ್ತಿದ್ದವು. ಮೈಲಾರಯ್ಯ ಮಾವಿನ ಹಣ್ಣುಗಳನ್ನು ಬಂಧು ಮಿತ್ರರಿಗೆಲ್ಲ ಹಂಚಿ ತಾವೂ ಕುಂಟುಂಬದವರೊಡನೆ

ತಿಂದು ಸಂಭ್ರಮಿಸುತ್ತಿದ್ದರು. ಶ್ರೀಕಂಠ ಬಾದಾಮಿ ಹಣ್ಣುಗಳನ್ನು ಮಾತ್ರ ತಿನ್ನುತ್ತಿದ್ದ. ರಸಪುರಿ ಜಾತಿಯ ಹಣ್ಣುಗಳನ್ನು ಕೈಯಿಂದಲೂ ಮುಟ್ಟುತ್ತಿರಲಿಲ್ಲ.

ತೋಟದ ಮನೆಯಲ್ಲಿ ಎಲ್ಲರೂ ಎರಡು ತಿಂಗಳಿರುತ್ತಿದ್ದುದರಿಂದ ಶ್ರೀಕಂಠ ಸಮಯ ಕಳೆಯಲು ಕನ್ನಡ ಮತ್ತು ಇಂಗ್ಲಿಷ್ ಗ್ರಂಥಗಳನ್ನು ಮೈಸೂರಿನಿಂದ ತಂದು ಮನೆಯ ಸಮೀಪದಲ್ಲಿದ್ದ ಗುಡ್ಡದ ಮೇಲೆ ಮರದ ನೆರಳಿನಲ್ಲಿ ಏಕಾಂಗಿಯಾಗಿ ಕುಳಿತು ಓದುತ್ತಿದ್ದ. ಕೈಯಲ್ಲೊಂದು ಪುಸ್ತಕವಿದ್ದರೆ ಊಟ, ತಿಂಡಿ, ನಿದ್ರೆ ಯಾವುದೂ ಅವನಿಗೆ ನೆನಪಾಗುತ್ತಿರಲಿಲ್ಲ, ಬೇಕೆನಿಸುತ್ತಿರಲಿಲ್ಲ.

ರಜಾದಿನಗಳಲ್ಲಿ ಹಳೆಗನ್ನಡದ ಕಾವ್ಯಗಳನ್ನು ಪುರಾಣಗಳನ್ನು ಓದಿ ಮುಗಿಸಿದ. ಷೇಕ್ಸ್‌ಪಿಯರ್ ನಾಟಕಗಳನ್ನು ಹಲವಾರು ಬಾರಿ ಅಧ್ಯಯನ ಮಾಡಿದ. ಪ್ರಸಿದ್ಧ ಇಂಗ್ಲಿಷ್ ಕವನಗಳನ್ನು ಕನ್ನಡ ಭಾಷೆಗೆ ಅನುವಾದ ಮಾಡಿದರೆ ಹೇಗೆಂದು ವಿಚಾರ ಮಾಡಿದ.

ಶ್ರೀಕಂಠ ಮುಂದಿನ ಮೂರು ವರ್ಷಗಳಲ್ಲಿ ಮೆಟ್ರಿಕ್ಯುಲೇಷನ್ ಮತ್ತೊಂದು ವರ್ಷದಲ್ಲಿ ವಿಶ್ವ ವಿದ್ಯಾನಿಲಯದ ಪರೀಕ್ಷೆಯಲ್ಲಿ ತೇರ್ಗಡೆಯಾದರು. ೧೮೮೪ ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಬಿ.ಎ. ಪದವಿ, ೧೮೮೬ ರಲ್ಲಿ ಮದ್ರಾಸಿನಲ್ಲಿರುವ ರೆಸಿಡೆನ್ಸಿ ಕಾಲೇಜಿನಲ್ಲಿ ಓದಿ ಬಿ.ಎಲ್. ಎಂಬ ಕಾನೂನಿನ ಪದವಿ ಮತ್ತು ೧೮೮೭ ರಲ್ಲಿ ಇಂಗ್ಲಿಷ್ ಎಂ.ಎ. ಪದವಿ ಪಡೆದರು. ಮೇಲ್ಕಂಡ ಎಲ್ಲಾ ಪರೀಕ್ಷೆಗಳಲ್ಲೂ ಪ್ರಥಮ ದರ್ಜೆಯಲ್ಲೆ ತೇರ್ಗಡೆಯಾದರು.

ಆ ಕಾಲದಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಅಸ್ತಿತ್ವಕ್ಕೆ ಬಂದಿರಲಿಲ್ಲ. ಎಂ.ಎ., ಬಿ.ಎಲ್. ಮುಂತಾದ ಸ್ನಾತಕೋತ್ತರ ಪದವಿಗಳನ್ನು ಪಡೆಯಲು ಮೈಸೂರು ಸಂಸ್ಥಾನದ ವಿದ್ಯಾರ್ಥಿಗಳು ಸಮೀಪದಲ್ಲಿದ್ದ ಮದ್ರಾಸಿನ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡಬೇಕಾಗಿತ್ತು. ಮದ್ರಾಸಿನ ವಿಶ್ವ ವಿದ್ಯಾನಿಲಯದಲ್ಲಿ ಶ್ರೀಕಂಠನ ಜೊತೆಯಲ್ಲಿ ಕೆಲವು ಕನ್ನಡಿಗರು ವ್ಯಾಸಂಗ ಮಾಡುತ್ತಿದ್ದು ಅವರೆಲ್ಲ ಆಗಾಗ ಸಮುದ್ರ ದಡದಲ್ಲಿ ಮರಳಿನ ಮೇಲೆ ಕುಳಿತು 'ಕನ್ನಡ ಭಾಷೆಯ ಶೋಚನೀಯ ಸ್ಥಿತಿ, ಸಾಹಿತ್ಯ ಸಂಪತ್ತನ್ನು ಹೆಚ್ಚಿಸುವುದನ್ನು ಕುರಿತು ಚರ್ಚಿಸುತ್ತಿದ್ದರು. ಇಂಗ್ಲಿಷ್ ಕವನಗಳು, ಕವಿಗಳು, ನಾಟಕಗಳ ಬಗ್ಗೆ ವಿಮರ್ಶಿಸುತ್ತಿದ್ದರು. ಈ ಚರ್ಚೆ, ವಿಮರ್ಶೆ, ವಿಚಾರ ವಿನಿಮಯಗಳಿಂದ ಶ್ರೀಕಂಠ ಇಂಗ್ಲಿಷ್ ಮತ್ತು ಕನ್ನಡ ಸಾಹಿತ್ಯದ ಬಗ್ಗೆ ಅಪಾರ ತಿಳುವಳಿಕೆಯನ್ನು ಪಡೆಯುವಂತಾಯಿತು.

**ವೈವಾಹಿಕ ಬದುಕು:**

ಅನಾರೋಗ್ಯದಿಂದ ನರಳುತ್ತಿದ್ದ ಮೈಲಾರಯ್ಯ ಹಿರಿಯಮಗನಾದ ಶ್ರೀಕಂಠನಿಗೆ ಮದುವೆ ಮಾಡಿ ಕುಟುಂಬದ ಜವಾಬ್ದಾರಿಯನ್ನು ವಹಿಸಲು ನಿಶ್ಚಯಿಸಿ ಸೂಕ್ತ ಸಂಬಂಧಕ್ಕಾಗಿ ಶೋಧನೆ ನಡೆಸಿದರು. ಸಮೀಪ ಬಂಧುಗಳಾಗಿದ್ದ ಬೆಳ್ಳೂರು ರಾಮಸ್ವಾಮಯ್ಯ ಚಿತ್ರದುರ್ಗದಲ್ಲಿ ಅಮಲ್ದಾರರಾಗಿದ್ದರು. ಅವರಿಗೆ ಆರು ಹೆಣ್ಣು, ಇಬ್ಬರು ಗಂಡುಮಕ್ಕಳಿದ್ದರು. ಹಿರಿಯ ಮಗಳು ದೇವಮ್ಮ ನೋಡಲು ಲಕ್ಷಣವಾಗಿದ್ದು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಳು. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳನ್ನು ಚೆನ್ನಾಗಿ ಕಲಿತಿದ್ದಳು. ದೇವರನಾಮಗಳನ್ನು ಇಂಪಾಗಿ ಹಾಡುತ್ತಿದ್ದಳು. ಹೊಲಿಗೆ ಕೆಲಸ, ಮಣಿ ತೋರಣ ಹಾಕುತ್ತಿದ್ದರು. ಮನೆಯ ಹಿರಿಯ ಮಗಳಾಗಿ ಮನೆಕೆಲಸಗಳನ್ನು ಮಾಡುವುದರಲ್ಲಿ ತಾಯಿಗೆ ಬಲಗೈನಂತಿದ್ದಳು.

ದೇವಮ್ಮ ಮಗ ಶ್ರೀಕಂಠನಿಗೆ ಸರಿಯಾದ ಜೋಡಿಯೆಂದು ಮೈಲಾರಯ್ಯ ನಿಶ್ಚಯಿಸಿದರು. ಯಾಕೆಂದರೆ ಅಂದಿನ ಕಾಲದಲ್ಲಿ ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸದೆ ಎಂಟು ಹತ್ತು ವರ್ಷ ಇಲ್ಲವೇ ಇನ್ನು ಕಡಿಮೆ ವಯಸ್ಸಿಗೆ ಮದುವೆ ಮಾಡುತ್ತಿದ್ದರು.

ಮೈಲಾರಯ್ಯ ಮಗನೊಡನೆ ರಾಮಸ್ವಾಮಯ್ಯನವರ ಮನೆಗೆ ಹೋಗಿ ಹೆಣ್ಣು ನೋಡಿದ ಶಾಸ್ತ್ರ ಮಾಡಿ ಗಂಡಿನ ತಂದೆಯೆಂಬ ಗರ್ವವಿಲ್ಲದೆ 'ದಯವಿಟ್ಟು ನಿಮ್ಮ ಮಗಳು ದೇವಮ್ಮನನ್ನು ನಮ್ಮ ಮಗನಿಗೆ ಕೊಟ್ಟು ಸಂಬಂಧ ಬೆಳೆಸಬೇಕು' ಎಂದು ವಿನಂತಿಸಿಕೊಂಡರು. ಅವರ ಮಾತಿನಿಂದ ರಾಮಸ್ವಾಮಯ್ಯನವರಿಗೆ ಅಚ್ಚರಿಯಾಯಿತು. ಯಾಕೆಂದರೆ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದ ಮಗಳಿಗೆ ಮದುವೆ ಮಾಡುವ ಉದ್ದೇಶ ಅವರಿಗಿರಲಿಲ್ಲ. ಆದರೆ ಅವರ ಪತ್ನಿ ಆರು ಜನ ಹೆಣ್ಣು ಮಕ್ಕಳಿಗೆ ತಾಯಿಯಾಗಿದ್ದು ಹಿರಿಮಗಳಿಗೆ ಮದುವೆ ಮಾಡುವ ಆತುರದಲ್ಲಿದ್ದರು.

"ಹುಡುಗ ಮನ್ಮಥನಂತಿದ್ದಾನೆ. ವಿದ್ಯಾವಂತ ಬುದ್ಧಿವಂತ, ಒಳ್ಳೆಯ ಮನೆತನಕ್ಕೆ ಸೇರಿದವನು. ಅನುಕೂಲವಾಗಿದ್ದಾರೆ. ತಾವಾಗಿ ಹೆಣ್ಣು ಕೇಳಿಕೊಂಡು ನಮ್ಮ ಮನೆಗೆ ಬಂದಿದ್ದಾರೆ, ಒಪ್ಪಿಕೊಳ್ಳಿ ಎಂದು ಆಕೆ ಗಂಡನನ್ನು ಒತ್ತಾಯಿಸಿ ಒಪ್ಪಿಸಿದರು. ಮದುವೆ ನಿಶ್ಚಯವಾಯಿತು.

ರಾಮಸ್ವಾಮಯ್ಯ ದಂಪತಿಗಳು ಹಿರಿಮಗಳಿಗೆ ದೇವಮ್ಮ ಎನ್ನುವ ಹೆಸರಿಡಲು ಕಾರಣವಿತ್ತು. ಅವರ ಮನೆದೇವರು 'ದೇವಕಾಂಬ ಬೆಳ್ಳೂರಿಗೆ ಮೂರು ಮೈಲಿ ದೂರದಲ್ಲಿರುವ ಕಾತೇನಹಳ್ಳಿಯಲ್ಲಿ ದೇವಕಾಂಬನ ಗುಡಿಯಿತ್ತು. ಮನೆಯ ಹಿರಿಮಗಳಿಗೆ ಮನೆ ದೇವತೆಯ ಹೆಸರನ್ನಿಡಲಾಗಿತ್ತು. ಆದರೆ ಮನೆಯವರೆಲ್ಲ ಅವಳನ್ನು 'ಗುಂಡಮ್ಮ' ಎಂದು ಕರೆಯುತ್ತಿದ್ದರು. ಅದಕ್ಕೂ ಕಾರಣವಿತ್ತು. ಇಬ್ಬರು ಮಕ್ಕಳು ಹುಟ್ಟಿ ಸತ್ತಮೇಲೆ ಹುಟ್ಟಿದವಳು ದೇವಮ್ಮ. ಕಲ್ಲುಗುಂಡಿನಂತೆ ದೀರ್ಘಾಯಷ್ಯ ಪಡೆಯಲಿ ಎನ್ನುವ ಉದ್ದೇಶವಿತ್ತು.

೧೮೮೦ರ ರಲ್ಲಿ ಇಪ್ಪತ್ತು ವರ್ಷದ ಶ್ರೀಕಂಠನಿಗೆ ಹನ್ನೆರಡು ವರ್ಷದ ದೇವಮ್ಮನೊಡನೆ ತುಮಕೂರು ಜಿಲ್ಲೆಯಲ್ಲಿರುವ ಸಂಪಿಗೆ ಗ್ರಾಮದಲ್ಲಿ ವಿವಾಹ ಸಮಾರಂಭ ನೆರವೇರಿತು. ಇಬ್ಬರು ಹೆಣ್ಣುಮಕ್ಕಳಿಗೆ ಮದುವೆಯಾಗಿತ್ತು. ಮೈಲಾರಯ್ಯ ಸ್ವರ್ಗಸ್ಥರಾದರು. ತಾಯಿ, ದೊಡ್ಡಮ್ಮ, ವ್ಯಾಸಂಗ ಮಾಡುತ್ತಿದ್ದ ಇಬ್ಬರು ತಮ್ಮಂದಿರ ಭವಿಷ್ಯ ರೂಪಿಸುವ ಜವಾಬ್ದಾರಿ ಶ್ರೀಕಂಠನ ಹೆಗಲ ಮೇಲೇರಿತು. ಆ ಕುಟುಂಬದ ಯಜಮಾನನಾಗಿ ಉದ್ಯೋಗ ಮತ್ತು ಸಂಪಾದನೆಯ ಅವಶ್ಯಕತೆಯಿತ್ತು. ಮೈಸೂರು ಮಹಾರಾಜ ಕಾಲೇಜಿನ ಪರೀಕ್ಷಾರ್ಥಕ ಕೆಲಸಕ್ಕೆ ಅರ್ಜಿ ಹಾಕಿಕೊಂಡರು. ಇಂಗ್ಲಿಷ್ ಅಧ್ಯಾಪಕರಾಗಿ ನೇಮಕಗೊಂಡರು. ಪ್ರಾಥಮಿಕ ಮತ್ತು ಪ್ರೌಢ ತರಗತಿಯ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಕಾವ್ಯ, ಗದ್ಯ, ನಾಟಕಗಳನ್ನು ಬೋಧಿಸುತ್ತಿದ್ದರು.

ಮೈಲಾರಯ್ಯನವರಿಗೆ ಮಗ ತಮ್ಮಂತೆ ವಕೀಲನಾಗದೆ ವೈದ್ಯನಾಗಿ ಶ್ರೀರಂಗಪಟ್ಟಣದ ಸುತ್ತಮುತ್ತಲಿರುವ ಹಳ್ಳಿಗಳಲ್ಲಿರುವ ಬಡರೋಗಿಗಳ ಸೇವೆ ಮಾಡಲಿ ಎನ್ನುವ ಅಪೇಕ್ಷೆಯಿತ್ತು. ಆದರೆ ತಂದೆಯ ಅಪೇಕ್ಷೆಯಂತೆ ಶ್ರೀಕಂಠ ವೈದ್ಯರಾಗಲಿಲ್ಲ. ಕಾನೂನಿನ ಪದವಿ ಪಡೆದಿದ್ದರೂ ತಂದೆಯಂತೆ ವಕೀಲವೃತ್ತಿ ಹಿಡಿಯಲಿಲ್ಲ. ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಸಾಹಿತ್ಯ ಬೋಧಿಸುವ ಅಧ್ಯಾಪಕರಾದರು. ಅದಕ್ಕೆ ಕಾರಣ ಅವರಿಗೆ ಇಂಗ್ಲಿಷ್ ಸಾಹಿತ್ಯದಲ್ಲಿದ್ದ ಒಲವು ಮತ್ತು ಆಸಕ್ತಿ. ಎಫ್.ಎ. ಬಿ.ಎ. ತರಗತಿಗಳಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯನ್ನಾಗಿ ಆಯ್ಕೆ ಮಾಡಿಕೊಂಡು ವ್ಯಾಸಂಗ ಮಾಡಿದ್ದರೂ ವೃತ್ತಿಗೆ ಇಂಗ್ಲಿಷ್ ಸಾಹಿತ್ಯವನ್ನು ಆಯ್ಕೆ ಮಾಡಿದರು.

ಬಿ.ಎಂ.ಶ್ರೀಯವರಿಗೆ ೧೮೯೦೫ ರಲ್ಲಿ ಶಾರದಮ್ಮ, ೧೯೧೦ ರಲ್ಲಿ ತಮ್ಮಯ್ಯ ಜನ್ಮ ತಾಳಿದರು. ದೇವಮ್ಮ ಹಿರಿಯರ ಬೇಕು ಬೇಡಗಳನ್ನು ಗಮನಿಸುತ್ತ

ಮೈದುನರನ್ನು ಒಡಹುಟ್ಟಿದವರಂತೆ ಪ್ರೀತಿಸುತ್ತ ಸರ್ವರ ವಿಶ್ವಾಸಕ್ಕೆ ಪಾತ್ರರಾಗುವಂತೆ ಯೋಗಕ್ಷೇಮ ನೋಡಿಕೊಂಡರು.

**ಸಂಭವಿಸಿದ ಆಘಾತಗಳು:**

ಬೇಸಿಗೆಯ ರಜಾದಿನಗಳೆಂದು ಶ್ರೀಕಂಠಯ್ಯನವರ ಕುಟುಂಬದವರೆಲ್ಲ ಹಿರೋಡೆಯಲ್ಲಿದ್ದ ತೋಟದ ಮನೆಯಲ್ಲಿ ವಾಸವಾಗಿದ್ದಾಗ ಒಂದು ಅಚಾತುರ್ಯ ನಡೆಯಿತು. ಇಬ್ಬರು ಮಕ್ಕಳಿಗೂ ಕಣ್ಣಿನ ಬೇನೆಯುಂಟಾಯಿತು. ಊರಿನ ವೈದ್ಯರು ಮಕ್ಕಳ ಕಣ್ಣುಗಳಿಗೆ ಮೈಲು ತುತ್ತದ ಪುಡಿಯನ್ನು ಸ್ವಲ್ಪ ಹಾಕಿದರೆ ಬೇಗ ರೋಗ ನಿವಾರಣೆಯಾಗುವುದೆಂದು ಹೇಳಿದರು. ಆಗ ಶ್ರೀಕಂಠಯ್ಯ ಊರಿನಲ್ಲಿರಲಿಲ್ಲ. ಶಾರದ ಚಿಕಿತ್ಸೆಗೆ ಸಹಕರಿಸಿದರೂ ಹತ್ತು ತಿಂಗಳ ತಮ್ಮಯ್ಯ ಪುಡಿ ಹಾಕುವಾಗ ಸುಮ್ಮನೆ ಇರದೆ ಕೈಕಾಲುಗಳನ್ನು ಬಡಿಯುತ್ತ ಅಳತೊಡಗಿದ. ಆಗ ದೇವಮ್ಮನ ಕೈಯಿಂದ ಸೂಚಿಸಿದ್ದಕ್ಕಿಂತ ಹೆಚ್ಚು ಪುಡಿ ಕಣ್ಣುಗಳಿಗೆ ಬಿದ್ದಿತು. ಮಾರನೆಯ ದಿನ ಶಾರದ ಕಣ್ಣುಗಳನ್ನು ತೆರೆದರೂ ತಮ್ಮಯ್ಯ ಕಣ್ತೆರೆಯಲಿಲ್ಲ. ಮೈಸೂರಿನಿಂದ ಹಿಂದಿರುಗಿದ ಶ್ರೀಕಂಠಯ್ಯ ಮಗನ ಪರಿಸ್ಥಿತಿ ಕಂಡು ಗಾಬರಿಯಾದರು. ತಡಮಾಡದೆ ಅವನನ್ನು ಕರೆದುಕೊಂಡು ಮದ್ರಾಸಿಗೆ ಪ್ರಯಾಣ ಮಾಡಿದರು. ಉನ್ನತ ವಿದ್ಯಾಭ್ಯಾಸಕ್ಕಾಗಿ ಹಲವಾರು ವರ್ಷ ಮದ್ರಾಸಿನಲ್ಲಿದ್ದಾಗ ಅವರಿಗೆ ಕೆಲವು ವಿದೇಶದ ವೈದ್ಯರ ಪರಿಚಯವಾಗಿತ್ತು. ಖ್ಯಾತ ನೇತ್ರ ತಜ್ಞರ ಬಳಿಗೆ ಮಗನನ್ನು ಕರೆದುಕೊಂಡು ಹೋಗಿ ಪರೀಕ್ಷೆಗೆ ಒಳಪಡಿಸಿದರು. ಅವರು ಪರೀಕ್ಷಿಸಿ 'ತುಂಬ ತಡವಾಗಿದೆ ಮಗುವಿನ ದೃಷ್ಟಿ ಮರಳಲು ಯಾವ ಸಾಧ್ಯತೆಗಳೂ ಇಲ್ಲ' ಎಂದು ಹೇಳಿದರು. ಶ್ರೀಕಂಠಯ್ಯ ಇನ್ನೂ ಕೆಲವು ವೈದ್ಯರಲ್ಲಿ ಮಗನನ್ನು ಪರೀಕ್ಷೆಗೆ ಒಳಪಡಿಸಿದರೂ ಪ್ರಯೋಜನವಾಗಲಿಲ್ಲ. ಹತ್ತು ತಿಂಗಳ ಮಗು ತಮ್ಮಯ್ಯ ಎರಡೂ ಕಣ್ಣುಗಳನ್ನು ಕಳೆದುಕೊಂಡು ಕುರುಡನಾದ. ಶ್ರೀಕಂಠಯ್ಯ ಬದುಕಿನಲ್ಲಿ ಎದುರಿಸಿದ ಪ್ರಥಮ ಆಘಾತವದು.

೧೯೧೩ ರಲ್ಲಿ ದೇವಮ್ಮ ಮತ್ತೊಂದು ಹೆಣ್ಣು ಮಗುವಿನ ತಾಯಿಯಾದರು. ಮಗುವಿಗೆ ತಂಗಮ್ಮ ಎಂದು ನಾಮಕರಣ ಮಾಡಲಾಯಿತು. ೧೯೧೫ ರಲ್ಲಿ ದೇವಮ್ಮ ಒಂದು ದಿನ ಮಳೆಯಲ್ಲಿ ನೆನೆದು ನಿಮೋನಿಯ ಕಾಯಿಲೆಯಿಂದ ನರಳಿ ಮೈಸೂರಿನಲ್ಲಿರುವ ಮಿಷನ್ ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದರು. ಮೂರು ಎಳೆಯ ಮಕ್ಕಳನ್ನು ಗಂಡನ ಮಡಿಲಿಗೆ ಹಾಕಿ ಇಡೀ ಕುಟುಂಬವನ್ನು ದುಃಖ ಸಾಗರದಲ್ಲಿ ಮುಳುಗಿಸಿದರು.

ಮೂರು ಮಕ್ಕಳ ತಂದೆಯಾಗಿದ್ದ ಶ್ರೀಕಂಠಯ್ಯನವರಿಗೆ ಪತ್ನಿಯನ್ನು ಕಳೆದುಕೊಂಡಾಗ ಇಪ್ಪತ್ತೆಂಟು ವರ್ಷ. ಮಾರನೆಯ ದಿನವೇ ಕಾಲೇಜಿಗೆ ಹೋಗಿ ಉತ್ತರ ರಾಮಚರಿತ್ರೆಯಲ್ಲಿರುವ 'ಸೀತಾ ಪರಿತ್ಯಾಗ' ಎಂಬ ವಿಷಯ ಕುರಿತು ಬೋಧಿಸಿ ಇಡೀ ಕಾಲೇಜನ್ನು ಚಕಿತಗೊಳಿಸಿದರು ಯಾಕೆಂದರೆ ಯಾರೂ ಅವರನ್ನು ನಿರೀಕ್ಷಿಸಿರಲಿಲ್ಲ. ಎರಡು ವಾರ ರಜ ಪಡೆದು ಮನೆಗೆ ಹಿಂತಿರುಗಿದರು.

ಅವರು ಏಕಾಂಗಿಯಾಗಿ ಬಂಗಾಳ ಮಹಾಸಮುದ್ರದ ತೀರದಲ್ಲಿರುವ ಧನುಷ್ಕೋಟಿ ಎಂಬ ಗ್ರಾಮಕ್ಕೆ ಪ್ರಯಾಣ ಮಾಡಿದರು. ಒಂದು ಕೊಠಡಿಯನ್ನು ಬಾಡಿಗೆಗೆ ಪಡೆದು ಪ್ರತಿನಿತ್ಯ ಬೆಳಗಿನಿಂದ ಸೂರ್ಯಾಸ್ತಮವಾಗುವವರೆಗೆ ಕಡಲಿನ ತೀರದಲ್ಲಿ ನಡೆಯುತ್ತಾ ಆಯಾಸವಾದರೆ ಮರದ ನೆರಳಿನಲ್ಲಿ ಕುಳಿತು ಯೋಚಿಸುತ್ತಾ ಸಂಕಟ ಪಡುತ್ತಿದ್ದರು.

ಒಂದು ದಿನ ಬೆಳಗಿನ ಝಾವ ಸದಾ ಜೇಬಿನಲ್ಲಿಟ್ಟುಕೊಂಡಿರುತ್ತಿದ್ದ ದಿನಚರಿ ಬರೆಯುತ್ತಿದ್ದ ಪುಸ್ತಕದಲ್ಲಿ ಇಂಗ್ಲಿಷ್ ಕವನವನ್ನು ಬರೆದು ಅದಕ್ಕೆ 'Dhanushkoti - 1915' ಎಂಬ ಹೆಸರನ್ನಿಟ್ಟರು.

ಮನೆ, ಮಕ್ಕಳು, ವಿದ್ಯಾರ್ಥಿಗಳ ನೆನಪಾಗಿ ಊರಿಗೆ ಹಿಂತಿರುಗಿದರು. ಆದರೆ ಅವರ ಮಾತು, ಸ್ವಭಾವ, ನಡವಳಿಕೆ ಮೊದಲಿನಂತಿರದೆ ಬದಲಾಗಿತ್ತು. ಕಾಲೇಜಿನ ಕೆಲಸ ಮುಗಿಸಿ ಮನೆಗೆ ಹಿಂತಿರುಗಿದ ಕೂಡಲೆ ಕೊಠಡಿಯಲ್ಲಿ ಪುಸ್ತಕ ಓದುತ್ತಾ ಕುಳಿತುಬಿಡುತ್ತಿದ್ದರು. ಯಾರನ್ನೂ ತಾವಾಗಿ ಮಾತನಾಡಿಸು ತ್ತಿರಲಿಲ್ಲ. ಯಾರಾದರೂ ತಾವಾಗಿ ಮಾತನಾಡಿಸಿದರೆ ಚುಟುಕಾಗಿ ಉತ್ತರ ಕೊಡುತ್ತಿದ್ದರು. ನಿಶ್ಚಲತೆ, ನಿರ್ಧಾರ, ಭವಿಷ್ಯದ ಬದುಕು ಅವರ ಗಂಭೀರವಾದ ಮುಖದ ಮೇಲೆ ಸ್ಪಷ್ಟವಾಗಿದ್ದವು. ಅಕ್ಕ ತೀರಿಕೊಂಡ ಮೇಲೆ ಭಾಗೀರಥಮ್ಮನಿಗೆ ಮೂರು ಮಕ್ಕಳನ್ನು ನೋಡಿಕೊಂಡು ಮನೆಕೆಲಸಗಳನ್ನು ಮಾಡುವುದು ಕಷ್ಟವಾಗುತ್ತಿತ್ತು. 'ಮಕ್ಕಳಿಗಾಗಿ ನೀನು ಮರು ಮದುವೆಯಾಗಬೇಕು. ನನಗೂ ವಯಸ್ಸಾಯ್ತು ನನ್ನ ಆರೋಗ್ಯವೂ ಮೊದಲಿನಂತಿಲ್ಲ' ಎಂದು ಮಗನಿಗೆ ಮತ್ತೊಂದು ಮದುವೆಯಾಗುವಂತೆ ಒತ್ತಾಯಿಸಿದರು.

ಮನೆಯವರೆಲ್ಲರ ಪ್ರೀತಿ, ವಿಶ್ವಾಸವನ್ನು ಸಂಪಾದಿಸಿದ್ದ ಪತ್ನಿಯ ಜಾಗಕ್ಕೆ ಮತ್ತೊಬ್ಬಳನ್ನು ತಂದು ಕೂರಿಸುವುದು ಶ್ರೀಕಂಠಯ್ಯನವರಿಗೆ ಬೇಕಿರಲಿಲ್ಲ. ಪ್ರತಿದಿನ ಬೆಳಗ್ಗೆ ತೋಟದಲ್ಲಿ ಅಡ್ಡಾಡಿ ಒಂದು ಗುಲಾಬಿ ಹೂವನ್ನು ಕಿತ್ತು ತಂದು ಪತ್ನಿಯ ಭಾವಚಿತ್ರಕ್ಕಿಡುತ್ತಿದ್ದರು. ಒಂದು ದಿನ ಹೂವನ್ನಿಟ್ಟು ಸಮೀಪದಲ್ಲಿದ್ದ ತಾಯಿಗೆ–

"ಅಮ್ಮ, ದೇವಮ್ಮ ನಮ್ಮೆಲ್ಲರ ಪ್ರೀತಿಯನ್ನು ಸಂಪಾದಿಸಿ ನನ್ನ ಮಡಿಲಿಗೆ ಮೂರು ಮಕ್ಕಳನ್ನು ಹಾಕಿ ಹೋಗಿದ್ದಾಳೆ. ಅವಳನ್ನು ಹೇಗೆ ಮರೆಯಲಿ? ಅವಳ ಸ್ಥಾನಕ್ಕೆ ಮತ್ತೊಬ್ಬಳನ್ನು ಹೇಗೆ ತಂದು ಕೂರಿಸಲಿ"? ಈ ಮಕ್ಕಳಿಗೆ ಮಲತಾಯಿ ತರುವುದು ನ್ಯಾಯವೇ?" ಎಂದು ಹೇಳಿ ಕಣ್ಣೀರಿಟ್ಟರು. ಅಂದಿನಿಂದ ಮಗನನ್ನು ಮರುಮದುವೆಗೆ ಒತ್ತಾಯಿಸುವುದನ್ನು ಭಾಗೀರಥಮ್ಮ ಮರೆತರು.

ಪತ್ನಿ ದೇವಮ್ಮನನ್ನು ಕಳೆದುಕೊಂಡ ಮೇಲೆ ಬದುಕೆಲ್ಲಾ ಬ್ರಹ್ಮಚಾರಿಯಾಗಿರಬೇಕೆಂದು ಶ್ರೀಕಂಠಯ್ಯ ನಿರ್ಧರಿಸಿದಾಗ ಅವರ ವಯಸ್ಸು ಇಪ್ಪತ್ತೆಂಟು. ತಾಯಿ ತೀರಿಕೊಂಡ ಮೇಲೆ ಮಕ್ಕಳ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತುಕೊಂಡರು. ತಂದೆಯ ಸ್ಥಾನದಲ್ಲಿ ನಿಂತು ಇಬ್ಬರು ತಮ್ಮಂದಿರು ವಕೀಲ ವೃತ್ತಿ ಹಿಡಿಯುವಂತೆ ನೆರವಾದರು. ಒಬ್ಬ ತಮ್ಮ ನಂಜನಗೂಡಿನಲ್ಲಿ ಮತ್ತೊಬ್ಬ ಮಂಡ್ಯದಲ್ಲಿ ನೆಲಸಿದರು. ಇಬ್ಬರಿಗೂ ಮದುವೆ ಮಾಡಿ ಸ್ವಂತ ಮನೆಯಲ್ಲಿ ಸಂಸಾರ ಹೂಡಲು ಕಾರಣರಾದರು.

ಇಬ್ಬರು ತಮ್ಮಂದಿರು, ಇಬ್ಬರು ತಂಗಿಯರು ಶ್ರೀಕಂಠಯ್ಯನವರನ್ನು ಪ್ರೀತಿ ಗೌರವಗಳಿಂದ 'ಅಣ್ಣಯ್ಯ' ಎಂದು ಕರೆಯುತ್ತಿದ್ದರು. ಕ್ರಮೇಣ ಅವರ ಮಕ್ಕಳು, ಮೊಮ್ಮಕ್ಕಳು, ಸೊಸೆಯರು, ಅಳಿಯಂದಿರಿಗೆ 'ಅಣ್ಣಯ್ಯ' ನಾದರು. ತಮ್ಮಂದಿರ ಜವಾಬ್ದಾರಿಯನ್ನು ಪೂರೈಸಿದ ಮೇಲೆ ತಮ್ಮ ಮಕ್ಕಳ ವಿದ್ಯಾಭ್ಯಾಸದ ಕಡೆ ಗಮನಕೊಟ್ಟರು.

ಬೆಂಗಳೂರಿನಲ್ಲಿ 'ಹೋಂ ಸ್ಕೂಲ್' ಎಂಬ ಖಾಸಗಿ ಶಾಲೆಯನ್ನು ಮಿಸ್ ಮುರಿಯಲ್ ರಾಬಿನ್‌ಸನ್ ಎಂಬ ಆಂಗ್ಲೋ ಇಂಡಿಯನ್ ಶಿಕ್ಷಕಿ ನಡೆಸುತ್ತಿದ್ದರು. ಆಕೆ ಮನೆಗೆ ಬಂದು ಮೂರು ಮಕ್ಕಳಿಗೂ ಪಾಠ ಹೇಳುವಂತೆ ಏರ್ಪಾಡು ಮಾಡಿದರು. ಮಿತ್ರರಾಗಿದ್ದ ಎಲ್.ಗುಂಡಪ್ಪ ಸಂಜೆ ಮನೆಗೆ ಬಂದು ಮಕ್ಕಳಿಗೆ ಕನ್ನಡ, ಸಂಸ್ಕೃತ, ಚರಿತ್ರೆ, ಭೂಗೋಳ ಮತ್ತು ವೇದಾಂತ ತತ್ತ್ವವನ್ನು ಬೋಧಿಸುತ್ತಿದ್ದರು. ಶ್ರೀಕಂಠಯ್ಯನವರೂ ಬಿಡುವಾದಾಗಲೆಲ್ಲಾ ಮಕ್ಕಳ ವಿದ್ಯಾಭ್ಯಾಸದ ಕಡೆ ಗಮನ ಕೊಡುತ್ತಿದ್ದರಲ್ಲದೆ ಸಾಧುಸಂತರ ಕಥೆಗಳನ್ನು ಹೇಳುತ್ತಿದ್ದರು. ಹಾಸ್ಯದ ಕಥೆಗಳನ್ನು ಹೇಳಿ ಮಕ್ಕಳನ್ನು ನಗಿಸಿ ತಾವೂ ನಗುತ್ತಿದ್ದರು. ಪುಸ್ತಕಗಳನ್ನು ತಂದುಕೊಟ್ಟು ಓದುವ ಹವ್ಯಾಸವನ್ನು ಅವರಲ್ಲಿ ಹುಟ್ಟು ಹಾಕಿದರು.

ಮಗ ತಮ್ಮಯ್ಯ ಕುರುಡ. ಆದ್ದರಿಂದ ಅವನು ಓದಲಾರ, ಬರೆಯಲಾರ ಎಂದು ಅಲಕ್ಷ್ಯ ಮಾಡದೆ ಅವರಿಗೂ ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ

ಭಾಷೆಗಳನ್ನು ಕಲಿಸುವ ಏರ್ಪಾಡು ಮಾಡಿದರು. ಅವರು ಸೊಗಸಾಗಿ ಈ ಮೂರು ಭಾಷೆಗಳನ್ನು ಅರ್ಥ ಮಾಡಿಕೊಳ್ಳುತ್ತಿದ್ದರು. ಮಾತನಾಡುವುದನ್ನೂ ಕಲಿತಿದ್ದರು. ಪಿಟೀಲು, ಕೊಳಲು ವಾದ್ಯಗಳನ್ನು ನುಡಿಸುವುದರಲ್ಲಿ ನಿಪುಣ ರಾಗಿದ್ದರು. ಮತ್ತೊಬ್ಬರ ಸಹಾಯವಿಲ್ಲದೆ ಮನೆಯಲ್ಲಿ ಓಡಾಡುತ್ತಾ ತಮ್ಮ ಕೆಲಸಗಳನ್ನೆಲ್ಲ ತಾವೇ ಮಾಡಿಕೊಳ್ಳುತ್ತಿದ್ದರು. ಮನೆಗೆ ಬರುತ್ತಿದ್ದ ಪರಿಚಿತರು, ಸಂಬಂಧಿಕರನ್ನು ಅವರ ಧ್ವನಿಯಿಂದಲೇ ಗುರುತಿಸಿ ಸ್ವಾಗತಿಸಿ ಯೋಗಕ್ಷೇಮ ವಿಚಾರಿಸುತ್ತಿದ್ದರು. ನಗುಮುಖದಿಂದ ಹರಟುತ್ತಿದ್ದರು.

ತಮ್ಮಯ್ಯ ಎಂಟು ವರ್ಷದ ಬಾಲಕನಾಗಿದ್ದಾಗ ಒಂದು ಪ್ರಸಂಗ ಸಂಭವಿಸಿತು. ದಸರಾ ಹಬ್ಬಕ್ಕಾಗಿ ಕೆಲವು ಸಂಬಂಧಿಕರು ಮನೆಗೆ ಆಗಮಿಸಿದ್ದರು. ಅವರು ಜಂಬೂ ಸವಾರಿ, ಅರಮನೆಯ ದೀಪಾಲಂಕಾರದ ಅಂದ ಚೆಂದ ಕುರಿತು ಮೆಚ್ಚುಗೆಯ ಮಾತುಗಳನ್ನಾಡುತ್ತಿದ್ದರು. ಅವರ ಮಾತುಗಳನ್ನು ಕೇಳಿಸಿಕೊಂಡ ತಮ್ಮಯ್ಯ ಅರಮನೆಯ ದೀಪಗಳನ್ನು ನೋಡಲು ಬಯಸಿದ. ನೆಂಟರಲ್ಲೊಬ್ಬರು 'ನೀನು ಕುರುಡ, ಅರಮನೆಯ ದೀಪಾಲಂಕಾರವನ್ನು ನೋಡಲಾರೆ' ಎಂದರು. ಆಗ ತಮ್ಮಯ್ಯ 'ನಾನು ನೋಡಲೇಬೇಕು ಎಂದು ಹಠ ಮಾಡಿದಾಗ ತಾಳ್ಮೆ ಕಳೆದುಕೊಂಡು ಆತ ಕಾದ ವಿದ್ಯುತ್ ಬಲ್ಬಿನ ಮೇಲೆ ಅವನ ಕೈಯನ್ನಿಟ್ಟರು. ಕೈ ಸುಟ್ಟು ತಮ್ಮಯ್ಯ ನೋವಿನಿಂದ ಜೋರಾಗಿ ಕಿರುಚಿಕೊಂಡ. ಅತ್ತು ಆಯಾಸಗೊಂಡ. ಅಂದಿನಿಂದ ಅವನು ಏನನ್ನೂ ನೋಡಬೇಕೆಂದು ಬಯಸಲಿಲ್ಲ.

ತಮ್ಮಯ್ಯ ಸದಾ ಖದ್ದರ್ ಬಟ್ಟೆಗಳನ್ನು ಧರಿಸುತ್ತಿದ್ದರು. ದಟ್ಟಿ ಪಂಚೆಯುಟ್ಟು ಜುಬ್ಬ ಹಾಕುತ್ತಿದ್ದರು. ಮನೆಗೆ ಬರುತ್ತಿದ್ದವರನ್ನು ನಗುಮುಖದಿಂದ ಬರಮಾಡಿಕೊಂಡು ಮಾತನಾಡಿಸುತ್ತಿದ್ದರು. ಹಸನ್ಮುಖಿ, ಪ್ರಾಮಾಣಿಕ ವ್ಯಕ್ತಿ. ಎಂದೂ ಸುಳ್ಳಾಡಿದವರಲ್ಲ. ಕಟುವಾದ ಮಾತುಗಳಿಂದ ಯಾರನ್ನೂ ನೋಯಿಸಿದವರಲ್ಲ. ಪರಿಚಯದವರೆಲ್ಲ ಅವರನ್ನು 'ಸತ್ಯ ಹರಿಶ್ಚಂದ್ರನ ಪ್ರತಿನಿಧಿ' ಎಂದು ಕರೆಯುತ್ತಿದ್ದರು. ಪಿಟೀಲು ಇಲ್ಲವೆ ಕೊಳಲು ನುಡಿಸುತ್ತ ಸಮಯ ಕಳೆಯುತ್ತಿದ್ದರು. ರೇಡಿಯೋ ಕಾರ್ಯಕ್ರಮಗಳನ್ನು ಕೇಳುತ್ತಿದ್ದರು. ಅವರಿಗೆ 'ಬೇಸರ' ಎನ್ನುವ ಪದದ ಪರಿಚಯವಿರಲಿಲ್ಲ. ಯಾರಾದರೂ 'ಬೇಸರ' ಎನ್ನುವ ಪದವನ್ನು ಉಪಯೋಗಿಸಿದರೂ ಸಿಟ್ಟಿನಿಂದ

'ಬೇಸರ ಎಂದರೇನು? ನಾನು ಕುರುಡ. ಓದಲಾರೆ, ಬರೆಯಲಾರೆ. ಆದರೂ ನನಗೆ ಬೇಸರವಾಗುವುದಿಲ್ಲ. ಯಾಕೆಂದರೆ ವಾದ್ಯಗಳನ್ನು ನುಡಿಸುತ್ತೇನೆ.

ರೇಡಿಯೋ ಕಾರ್ಯಕ್ರಮಗಳನ್ನು ಕೇಳಿ ಸುದ್ದಿ ಸಮಾಚಾರಗಳ ತಿಳುವಳಿಕೆ ಪಡೆಯುತ್ತೇನೆ. ಆದರೆ ನಿಮಗೆ ದೇವರು ಕಣ್ಣುಗಳನ್ನು ಕೊಟ್ಟಿದ್ದಾನೆ. ನೀವು ಪುಸ್ತಕಗಳನ್ನು ಓದಬಹುದು, ಬರೆಯಬಹುದು, ಪ್ರಪಂಚವನ್ನೇ ನೋಡಿ ಸಂತೋಷಪಡಬಹುದು ಆದರೂ ನಿಮಗೇಕೆ ಬೇಸರವಾಗಬೇಕು?" ಎಂದು ಅಸಹನೆ ಹಾಗೂ ಆಶ್ಚರ್ಯದಿಂದ ಪ್ರಶ್ನಿಸುತ್ತಿದ್ದರು.

ಹಾಸನದಲ್ಲಿದ್ದ ತಂಗಿ ನಂಜಮ್ಮ ಹತ್ತು ಮಕ್ಕಳ ತಾಯಿಯಾಗಿ ವಿಧವೆಯಾದಾಗ ಶ್ರೀಕಂಠಯ್ಯ ಆಕೆಗೆ ಸ್ವಂತ ಮನೆ ಮಾಡಿಕೊಟ್ಟು ಮಕ್ಕಳ ವಿದ್ಯಾಭ್ಯಾಸಕ್ಕೆ ನೆರವಾದರು. ಆ ಕಾಲದಲ್ಲಿ ಬ್ರಾಹ್ಮಣ ಸ್ತ್ರೀಯರು ವಿಧವೆಯಾದರೆ 'ಕೇಶ ಮುಂಡನ' ಮತ್ತು ಮಂಗಳ ದ್ರವ್ಯಗಳನ್ನು ತ್ಯಜಿಸುವುದು ಇತ್ಯಾದಿ ಅನಿಷ್ಟ ಪದ್ಧತಿಗಳನ್ನು ಅನುಸರಿಸಬೇಕಾಗಿತ್ತು. ತಂಗಿ ಆ ಪದ್ಧತಿಯನ್ನು ಅನುಸರಿಸದಂತೆ ತಡೆದರು. ವಿಧವೆಯರು, ನಿರ್ಗತಿಕ ಮಹಿಳೆಯರಿಗೆ ಗೌರವದಿಂದ ಸಮಾಜದಲ್ಲಿ ಬದುಕುವ ದಾರಿ ತೋರಿಸಿದರು. ಆಕೆಯ 'ಕೆಂಪು ಚೆಲುವಾಜಮ್ಮಣ್ಣಿ ಮಹಿಳಾ ಸಮಾಜ'ದ ಸ್ಥಾಪನೆಗೆ ಪ್ರೋತ್ಸಾಹ ನೀಡಿ ಅದರ ಬೆನ್ನೆಲುಬಾಗಿ ನಿಂತರು. ನಂಜಮ್ಮ 'ಸಮಾಜದ ನಂಜಮ್ಮ' ಎಂದೇ ಪ್ರಸಿದ್ಧರಾಗಿ ಮಹಿಳೆಯರ ಪ್ರಗತಿಗಾಗಿ ಕೊನೆಯುಸಿರಿರುವವರೆಗೆ ಶ್ರಮಿಸಿದರು.

ಮತ್ತೋರ್ವ ಹತ್ತಿರದ ಸಂಬಂಧಿ ಶ್ರೀಮತಿ ಕಮಲಮ್ಮ ದಾಸಪ್ಪ, ಎರಡು ಮಕ್ಕಳ ತಾಯಿ. ಚಿಕ್ಕ ವಯಸ್ಸಿನಲ್ಲೆ ವಿಧವೆಯಾದಾಗ ಆಕೆಗೆ ಶ್ರೀಕಂಠಯ್ಯ ಪದವೀಧರೆಯಾಗಲು ಬೆಂಗಳೂರಿನಲ್ಲಿ ಮಹಿಳಾ ಸೇವಾ ಸಮಾಜ ಸ್ಥಾಪಿಸಿ ನಿರ್ಗತಿಕ ಹಾಗೂ ಅನಾಥ ಮಹಿಳೆಯರಿಗೆ ಶಿಕ್ಷಣ ಕ್ರೀಡೆ, ಉದ್ಯೋಗ, ಕಲೆಗಳಲ್ಲಿ ತರಪೇತಿ ನೀಡಿ ಜೀವನ ನಿರ್ವಹಣೆಯನ್ನು ಹೊಸಮಾರ್ಗದಲ್ಲಿ ಮಾಡುವಂತೆ ಪ್ರೋತ್ಸಾಹಿಸಿದರು. ಹಲವಾರು ವಿಧವೆಯರಿಗೆ ಗೌರವದಿಂದ ಬಾಳುವ ದಾರಿ ತೋರಿಸಿದರು. ಅದಕ್ಕೆ ಕಾರಣ ಮಹಿಳೆಯರ ಬಗ್ಗೆ ಅವರಿಗಿದ್ದ ಅನುಕಂಪ, ಕಾಳಜಿ ಹಾಗೂ ದುಃಖ ದುಮ್ಮಾನಗಳಿಗೆ ಸ್ಪಂದಿಸುವ ಪ್ರಗತಿಪರ ದೃಷ್ಟಿಕೋನ.

ಹಿರಿಯ ಮಗಳಾದ ಶಾರದಮ್ಮನಿಗೆ ಶ್ರೀಕಂಠಯ್ಯ ಹದಿನಾರನೆಯ ವಯಸ್ಸಿನಲ್ಲಿ ಹಾಸನದ ಸಂತೇ ಬಾಚಳ್ಳಿ ಮನೆತನದ ಎಸ್.ಆರ್. ಗುಂಡಪ್ಪನೊಡನೆ ಮನೆಯಲ್ಲೆ ಸರಳವಾಗಿ ವಿವಾಹ ಸಮಾರಂಭವನ್ನು ನೆರವೇರಿಸಿದರು.

ಎಸ್.ಆರ್. ಗುಂಡಪ್ಪ ಆರಡಿ ಎತ್ತರದ ತೆಳುವಾದ ಮೈಕಟ್ಟಿನ ಸ್ಫುರದ್ರೂಪಿ. ವಿವಾಹವಾದ ಸಂದರ್ಭದಲ್ಲಿ ಅವರು ಮಧ್ಯವರ್ತಿ ಪರೀಕ್ಷೆಗೆ ಸಿದ್ಧತೆ ಮಾಡಿಕೊಳ್ಳುತ್ತಿದ್ದರು (Inter mediate). ಮದುವೆಯಾದ ಮೇಲೆ ಇಂಗ್ಲಿಷ್

ಎಂ.ಎ. ಪದವಿ ಪಡೆದು ಅಧ್ಯಾಪಕರಾದರು. ಬೋಧಕರಾಗಿ ಬಹು ಬೇಗ ವಿದ್ಯಾರ್ಥಿಗಳ ಮೆಚ್ಚುಗೆ ಸಂಪಾದಿಸಿದರು. ಶ್ರೀಕಂಠಯ್ಯ ವರ್ಷದ ಅಂತ್ಯದಲ್ಲಿ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ವಿಶೇಷ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾಗ ಗುಂಡಪ್ಪನವರ ಉಪನ್ಯಾಸಗಳನ್ನು ಕೇಳಿ ಮೆಚ್ಚಿಕೊಂಡಿದ್ದರು. ಚರ್ಚಾಕೂಟದಲ್ಲಿ ವಿರೋಧ ಪಕ್ಷದಲ್ಲಿದ್ದ ಅವರ ಮಾತುಗಳನ್ನು ಕೇಳಿ ಸಂತೋಷಪಟ್ಟಿದ್ದರು.

ಎರಡು ವರ್ಷಗಳಾದ ಮೇಲೆ ಎರಡನೆಯ ಮಗಳು ತಂಗಮ್ಮನಿಗೆ ೧೯೨೫ನೇ ಇಸವಿ ಫೆಬ್ರವರಿ ತಿಂಗಳಿನಲ್ಲಿ ಮೈಸೂರಿನಲ್ಲಿ ಮದುವೆ ಮಾಡಿದರು. ಅಳಿಯನ ಹೆಸರು ಎನ್.ಡಿ.ನಾಗರಾಜರಾವ್. ಅವರು ಮಹಾರಾಜ ಕಾಲೇಜಿನಲ್ಲಿ ಶ್ರೀಕಂಠಯ್ಯನವರ ಶಿಷ್ಯರಾಗಿದ್ದರು. ವೃತ್ತಿಯಲ್ಲಿ ವಾಸ್ತುಶಿಲ್ಪ ವಿಜ್ಞಾನಿಯಾಗಿದ್ದರು. ಸಾಹಿತ್ಯ ಪ್ರೇಮಿ, ಹಲವಾರು ಸಾಹಿತ್ಯ ಸಮ್ಮೇಳನಗಳಲ್ಲಿ ಭಾಗವಹಿಸಿದ್ದರು.

ಶಾರದಮ್ಮ ಒಂದು ಹೆಣ್ಣು, ಒಂದು ಗಂಡು ಮಗುವಿನ ತಾಯಿಯಾದರು. ಆದರೆ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ವಿಧವೆಯಾದರು. ಆಗ ಗುಂಡಪ್ಪನವರ ವಯಸ್ಸು ಇಪ್ಪತ್ತೆಂಟು. ಟೈಫಾಯಿಡ್ ಜ್ವರದಿಂದ ಸಾವನ್ನಪ್ಪಿದರು. ಆ ಸಂದರ್ಭದಲ್ಲಿ ಶ್ರೀಕಂಠಯ್ಯ ಕಲ್ಬುರ್ಗಿಯಲ್ಲಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ೧೪ ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅಳಿಯನ ಸಾವಿನ ಸುದ್ದಿಯನ್ನು ಹೊತ್ತ ಚೀಟಿಯನ್ನು ತಂದುಕೊಟ್ಟಾಗ ಅವರು ಭಾಷಣ ಮಾಡುತ್ತಿದ್ದರು. ಚೀಟಿಯನ್ನು ಓದಿದರೂ ಅಧ್ಯಕ್ಷ ಭಾಷಣವನ್ನು ಮೊಟಕುಗೊಳಿಸದೆ ಮುಗಿಸಿದರು. ಸಂಜೆ ಸಮ್ಮೇಳನದಲ್ಲಿ ಅವರ 'ಗದಾಯುದ್ಧ ನಾಟಕ'ದ ಪ್ರದರ್ಶನವಿತ್ತು. ಶ್ರೀಕಂಠಯ್ಯನವರ ಅಳಿಯನ ಸಾವಿನ ಸುದ್ದಿ ತಿಳಿದ ಮಿರ್ಜಾ ಇಸ್ಮಾಯಿಲ್ ಸಾಹೇಬರು ಪಕ್ಕದಲ್ಲಿ ಕುಳಿತಿದ್ದ ಗುಂಡಪ್ಪನವರಿಗೆ 'Poor Srikantiah, he has already suffered so much in his personal life. This is yet another blow to him' ಎಂದು ಹೇಳಿ ತಮ್ಮ ಸಂತಾಪವನ್ನು ವ್ಯಕ್ತಪಡಿಸಿದರಂತೆ.

ಮೈಸೂರಿಗೆ ಹಿಂತಿರುಗಿದ ಶ್ರೀಕಂಠಯ್ಯ ಮರುದಿನವೇ ಕಾಲೇಜಿಗೆ ಹೋದಾಗ ವಿದ್ಯಾರ್ಥಿಗಳು, ಸಹೋದ್ಯೋಗಿಗಳು ಪ್ರೀತಿ, ಗೌರವಗಳಿಗೆ ಪಾತ್ರರಾಗಿದ್ದ ಗುಂಡಪ್ಪನವರ ಸಂತಾಪ ಸೂಚಕ ಸಭೆಯನ್ನು ಏರ್ಪಡಿಸಿದ್ದರು. ಅವರು ಪಾಠ ಮಾಡಲು ತರಗತಿಯನ್ನು ಪ್ರವೇಶಿಸಿ ಗದ್ಗದ ಧ್ವನಿಯಲ್ಲಿ 'If the young man had won the hearts of you all' ಎಂದು ನುಡಿಯುತ್ತಿದ್ದಂತೆ ದುಃಖದಿಂದ ಮಾತನಾಡಲಾಗದೆ ತಲೆತಗ್ಗಿಸಿ ಮೌನವಾಗಿ

ನಿಂತರೂ ಮರುಕ್ಷಣದಲ್ಲಿ ಮನಸ್ಸನ್ನು ಹತೋಟಿಗೆ ತಂದುಕೊಂಡು ಪಾಠ ಪ್ರಾರಂಭಿಸಿದರು.

ಶಾರದಮ್ಮ ವಿಧವೆಯಾದಾಗ ಅವರ ಮಗಳು ವಿಶಾಲಾಕ್ಷಿಯ ವಯಸ್ಸು ನಾಲ್ಕು ಮಗ ಶ್ರೀಕಂಠನ ವಯಸ್ಸು ಎರಡು ವರ್ಷ. ಆಕೆ ಮಕ್ಕಳೊಂದಿಗೆ ಅತ್ತೆಯ ಮನೆಯಲ್ಲಿ ಆಶ್ರಯ ಪಡೆಯದೆ ತಂದೆಯ ಮನೆಗೆ ಹಿಂತಿರುಗಿದರು ಹೆಣ್ಣು ದಿಕ್ಕಿಲ್ಲದ ಆ ಮನೆಯ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡರು ತಂದೆ. ಕುರುಡ ತಮ್ಮ ತನ್ನಿಬ್ಬರು ಮಕ್ಕಳನ್ನು ಮುತುವರ್ಜಿಯಿಂದ ನೋಡಿಕೊಂಡರು. ತಂದೆಯ ಸಾಹಿತ್ಯ ಚಟುವಟಿಕೆಗಳಿಗೆ ಬೆನ್ನೆಲುಬಾಗಿ ನಿಂತರು.

ಎರಡನೆಯ ಮಗಳು ತಂಗಮ್ಮ ಆರು ಮಕ್ಕಳ ತಾಯಿಯಾಗಿ ನೆಮ್ಮದಿಯಿಂದ ಸಂಸಾರ ಮಾಡಿದರು.

ಮಗನ ಅಂಧತ್ವ ಪತ್ನಿಯ ಸಾವು, ಮಗಳ ವೈಧವ್ಯ ಮುಂತಾದ ದುರ್ಘಟನೆಗಳು ಸಂಭವಿಸಿದಾಗಲೆಲ್ಲ ಶ್ರೀಕಂಠಯ್ಯ ಶ್ರವಣಬೆಳಗೊಳದ ಸ್ವಾಮೀಜಿಯವರು ಹೇಳಿದ ಮಾತುಗಳನ್ನು ನೆನಪಿಸಿಕೊಂಡು ಸಮಾಧಾನ ಮಾಡಿಕೊಳ್ಳುತ್ತಿದ್ದರು. ಶಾಲೆಯ ವಿದ್ಯಾರ್ಥಿಯಾಗಿದ್ದಾಗ ಅವರು ಮೊದಲ ಬಾರಿ ಗೊಮ್ಮಟನ ದರ್ಶನ ಮಾಡಲು ಶ್ರವಣಬೆಳಗೊಳಕ್ಕೆ ಹೋಗಿದ್ದರು. ಆಗ ಸ್ವಾಮೀಜಿಯವರು 'ನಿನ್ನ ಜೀವನದಲ್ಲಿ ಅನೇಕ ಕಷ್ಟನಷ್ಟಗಳು ಎದಿರಾಗುತ್ತವೆ. ಆದರೆ ಚಿಂತಿಸುವ ಅಗತ್ಯವಿಲ್ಲ, ಅವುಗಳನ್ನು ದೇವರು ಚಿನ್ನವನ್ನು ಪುಟಕ್ಕೆ ಹಾಕಿದ ಬೆಂಕಿಯೆಂದು ತಿಳಿದುಕೊ ಎಂದು ಹೇಳಿದ್ದರು. ಆಮೇಲೂ ಹಲವು ಬಾರಿ ಶ್ರವಣಬೆಳಗೊಳಕ್ಕೆ ಹೋಗಿ ಗೊಮ್ಮಟನ ದರ್ಶನ ಮಾಡಿದರು. ಜೈನಧರ್ಮವನ್ನು ನಂತರ ಸಕಲ ಧರ್ಮಗಳನ್ನೂ ಅಧ್ಯಯನ ಮಾಡಿದರು. ಜೈನಧರ್ಮ ಎತ್ತಿ ಹಿಡಿದಿರುವ ಶಾಂತಿ, ಅಹಿಂಸೆ ಇತ್ಯಾದಿ ಮೌಲ್ಯಗಳನ್ನು ಬಹುವಾಗಿ ಮೆಚ್ಚಿಕೊಂಡರು. ಧರ್ಮ ಸಮ್ಮೇಳನಗಳಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದರು.

ಶ್ರೀಕಂಠಯ್ಯ ಎಳೆಯ ವಯಸ್ಸಿನಲ್ಲೆ ತಂದೆಯನ್ನು ಕಳೆದುಕೊಂಡ ಮೊಮ್ಮಕ್ಕಳನ್ನು ತಮ್ಮ ರಕ್ಷಣೆ, ಪೋಷಣೆಯಲ್ಲಿ ಬೆಳೆಸಿದರು. ಮೊಮ್ಮಗಳು ವಿಶಾಲಾಕ್ಷಿ ಪಾದರಸದಂತೆ ಲವಲವಿಕೆಯಿಂದಿದ್ದಳು. ನೋಡಲು ಸಕ್ಕರೆಯ ಬೊಂಬೆಯಂತೆ ಸುಂದರವಾಗಿದ್ದಳು. ಮೊಮ್ಮಗ ಶ್ರೀಕಂಠ ತಂದೆಯ ಪಡಿಯಚ್ಚು. ಗಂಡು, ಹೆಣ್ಣು ಎಂಬ ಬೇಧ ಭಾವ ಮಾಡದೆ ಮೊಮ್ಮಕ್ಕಳನ್ನು ಸಮಾನತೆಯ ದೃಷ್ಟಿಕೋನದಿಂದ ಸಾಕಿದರು.

'ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ತುಂಬ ಅಗತ್ಯ. ಗಂಡು ಮಕ್ಕಳು ಹೇಗೊ ಬದುಕುತ್ತಾರೆ. ಆದರೆ ಮಹಿಳೆಗೆ ಕಷ್ಟಗಳು ಎದುರಾದರೂ ಅವಳು ವಿದ್ಯಾವಂತಳಾಗಿದ್ದರೆ ಹೆದರದೆ ಆತ್ಮವಿಶ್ವಾಸದಿಂದ ಬದುಕಬಹುದು. ಇಲ್ಲದಿದ್ದರೆ ಅಸಹಾಯಕತೆಯಿಂದ ನರಳಬೇಕಾಗುತ್ತದೆ ಎಂದು ಅವರು ಮಹಿಳಾ ವಿದ್ಯಾಭ್ಯಾಸಕ್ಕೆ ಪ್ರಾಮುಖ್ಯತೆಯನ್ನು ನೀಡಿದರು.

ಮೊಮ್ಮಕ್ಕಳನ್ನು ಕಾರಿನಲ್ಲೆ ಶಾಲೆಗೆ ಕಳುಹಿಸಿ ಮನೆಗೆ ಕರೆಸಿಕೊಳ್ಳುತ್ತಿದ್ದರು. ಅವರಿಗೆ ಯಾವ ಕೊರತೆಯಾಗದಂತೆ ನೋಡಿಕೊಳ್ಳುತ್ತಿದ್ದರು. ಅವರ ಬಳಿಯಿದ್ದ ಕಾರು ತುಂಬ ಹಳೆಯದಾಗಿದ್ದು ರಸ್ತೆಯಲ್ಲಿ ಆಗಾಗ ಕೆಟ್ಟು ನಿಲ್ಲುತ್ತಿತ್ತು. ಒಂದು ದಿನ ಕಾರು ಕೆಟ್ಟು ಮೊಮ್ಮಕ್ಕಳು ಜಟಕಾಗಾಡಿಯಲ್ಲಿ ಶಾಲೆಗೆ ಹೋಗುವಂತಾಯಿತು. ಬೇಸರಗೊಂಡ ಶ್ರೀಕಂಠಯ್ಯ ಮೊಮ್ಮಕ್ಕಳನ್ನೆ ಅಂಗಡಿಗೆ ಕಳುಹಿಸಿ 'ನಿಮಗೆ ಯಾವ ಕಾರು ಇಷ್ಟವಾಗುತ್ತದೋ ಆ ಕಾರಿನಲ್ಲೆ ಮನೆಗೆ ಬನ್ನಿ ಎಂದು ಹೇಳಿದರು. ಅವರು ಹೊಸ ಕಾರಿನಲ್ಲಿ ಮನೆಗೆ ಬಂದಾಗ ಸಂತೋಷಪಟ್ಟರಲ್ಲದೆ ಮಾರನೆಯ ದಿನ ತಾವೇ ಅಂಗಡಿಗೆ ಹೋಗಿ ಹಣಕೊಟ್ಟರು.

ಅಂದಿನ ಕಾಲದಲ್ಲಿ ಶ್ರೀಕಂಠಯ್ಯನವರಿಗೆ ಕನ್ನಡ ನಾಡಿನಲ್ಲಿ ದೊರಕುತ್ತಿದ್ದಷ್ಟು ಮರ್ಯಾದೆ, ಗೌರವ, ಮನ್ನಣೆ, ಸನ್ಮಾನ ಬೇರೆ ಯಾರಿಗೂ ಲಭಿಸುತ್ತಿರಲಿಲ್ಲ. ಸನ್ಮಾನಿತರಿಗೆ ಆಗ ಶಾಲು ಹೊದಿಸುವ ಪದ್ಧತಿ ರೂಢಿಯಲ್ಲಿರಲಿಲ್ಲ. ಮಲ್ಲಿಗೆ ಹೂವಿನ ಹಾರ ಹಾಕಿ ಫಲ ತಾಂಬೂಲವನ್ನು ನೀಡಲಾಗುತ್ತಿತ್ತು. ಸಮಾರಂಭ ಮುಗಿದ ಮೇಲೆ ಯಾರಾದರೂ ಅವರ ಕತ್ತಿನಲ್ಲಿದ್ದ ಹಾರವನ್ನು ಕೇಳಿದರೆ, 'ನೀವು ಫಲ ತಾಂಬೂಲ ಕೇಳಿದರೆ ಕೊಡುತ್ತೇನೆ. ಆದರೆ ಹೂವಿನ ಹಾರವನ್ನು ಕೊಡುವುದಿಲ್ಲ. ಯಾಕೆಂದರೆ ಮನೆಗೆ ಹೋದ ಕೂಡಲೆ ನನ್ನ ಮೊಮ್ಮಗಳು 'ಅಣ್ಣಯ್ಯ, ನನಗೆ ಹಾರ ಕೊಡು' ಎಂದು ಕೇಳುತ್ತಾಳೆ. ಅದು ಅವಳಿಗೆ ಮಾತ್ರ ಮೀಸಲು ಹಾರ ಕೊಟ್ಟ ಕೂಡಲೆ ಕತ್ತಿಗೆ ಹಾಕಿಕೊಂಡು ಸಂಭ್ರಮದಿಂದ ಕುಣಿಯುತ್ತಾಳೆ. ಆ ದೃಶ್ಯ ನನ್ನದೆಯನ್ನು ತಂಪಾಗಿಸುತ್ತದೆ ಎಂದು ಹೇಳುತ್ತಿದ್ದರು. ಆಕೆಗೆ ಸಂಗೀತದಲ್ಲಿ ಆಸಕ್ತಿಯಿರುವ ವಿಷಯ ತಿಳಿದು ಚೌಡಯ್ಯನವರಿಂದ ಪಿಟೀಲು ಕಲಿಯಲು ಅವಕಾಶ ಮಾಡಿಕೊಟ್ಟರು. ಆಕೆ ಮೈಸೂರು ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಆನರ್ಸ್ ಓದುತ್ತಿದ್ದಾಗ ಅನೇಕ ಮೌಲಿಕ ಗ್ರಂಥಗಳನ್ನು ತಂದುಕೊಟ್ಟು ಅವುಗಳ ಅಧ್ಯಯನ ಮಾಡುವಂತೆ ಹೇಳುತ್ತಿದ್ದರು. ಒಂದು ದಿನ 'ವಿಶಾಲು, ನೀನು ಎಂ.ಎ. ಪದವಿ ಪಡೆದ ಮೇಲೆ ನನ್ನ ಅನುವಾದ ಕಾರ್ಯದಲ್ಲಿ ಕೈ ಜೋಡಿಸು ಷೇಕ್ಸ್‌ಪಿಯರ್ ಕನ್ನಡ ಪ್ರಪಂಚಕ್ಕೆ ಆಗಮಿಸಲು

ನಿನಗಾಗಿ ಕಾಯುತ್ತಿದ್ದಾನೆ ಎಂದು ಹೇಳಿದ್ದರು. ಆದರೆ ಆ ದಿನ ಆಗಮಿಸಲಿಲ್ಲ. ಯಾಕೆಂದರೆ ವಿಶಾಲಾಕ್ಷಿ ವಿದ್ಯಾರ್ಥಿಯಾಗಿದ್ದಾಗಲೆ ಶ್ರೀಕಂಠಯ್ಯ ನಿಧನರಾದರು.

ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಮೊಮ್ಮಗ ಶ್ರೀಕಂಠನಿಗೆ ತೇರ್ಗಡೆಯಾಗದಿದ್ದಾಗ ಶಾಲೆಯ ಅಧ್ಯಾಪಕರು 'ನಿಮ್ಮ ಮೊಮ್ಮಗ ತುಂಬ ಬುದ್ಧಿವಂತ. ಅವನು ತೇರ್ಗಡೆಯಾಗದಿರುವುದಕ್ಕೆ ಖಂಡಿತ ಸಾಧ್ಯವಿಲ್ಲ, ಮರು ಎಣಿಕೆಗೆ ಹಾಕೋಣ ಎಂದು ಸಲಹೆ ನೀಡಿದಾಗ ಶ್ರೀಕಂಠಯ್ಯ "ನಿಜವಾಗಿ ಎಣಿಕೆಯಲ್ಲಿ ತಪ್ಪಾಗಿದ್ದು ಅವನು ತೇರ್ಗಡೆಯಾದರೂ 'ತಾತ ತಮ್ಮ ಶಿಫಾರಸ್ಸಿನಿಂದ ಮೊಮ್ಮಗನನ್ನು ತೇರ್ಗಡೆ ಮಾಡಿಸಿದರು" ಎನ್ನುವ ಅಪವಾದ ನನ್ನ ಮೇಲೆ ಬರುತ್ತದೆ. ಆದ್ದರಿಂದ ಮರುಎಣಿಕೆ ಮಾಡಿಸುವುದು ಬೇಡ. ಅವನು ಇನ್ನೊಂದು ವರ್ಷ ಓದಲಿ ಎಂದರು.

ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಪರಿಷತ್ತಿನಲ್ಲಿ ಶಾಲಾ ವಿದ್ಯಾರ್ಥಿಗಳಿಗೆ ಬಾಯಿಪಾಠ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಮೊಮ್ಮಗ ಶ್ರೀಕಂಠನಿಗೆ ಪ್ರಥಮ ಬಹುಮಾನ ಬಂದಿರುವ ವಿಷಯ ತಿಳಿದಾಗ 'ಅವನು ನನ್ನ ಮೊಮ್ಮಗ, ಆದ್ದರಿಂದ ಅವನಿಗೆ ಬಹುಮಾನ ಕೊಡಬೇಡಿ. ಮೊದಲೇ ಗೊತ್ತಿದ್ದರೆ ಸ್ಪರ್ಧೆಯಲ್ಲಿ ಭಾಗವಹಿಸುವುದಕ್ಕೆ ನಾನು ಅವಕಾಶ ಮಾಡಿಕೊಡುತ್ತಿರಲಿಲ್ಲ.' ಎಂದು ಸ್ಪರ್ಧೆಯನ್ನು ಏರ್ಪಡಿಸಿದ್ದ ಅಧಿಕಾರಿಗಳಿಗೆ ತಿಳಿಸಿದರು. ಬಹುಮಾನ ತಪ್ಪಿದ ಬೇಸರದಲ್ಲಿ ಶ್ರೀಕಂಠ ತನ್ನ ಸಂಕಟವನ್ನು ತಾಯಿಯಲ್ಲಿ ತೋಡಿಕೊಂಡ. ಆಗ ಶಾರದಮ್ಮ 'ನಿನ್ನ, ತಾತನ ನಡುವೆ ಪ್ರವೇಶಿಸಿ ನಾನು ಮಧ್ಯಸ್ತಿಕೆ ಮಾಡುವುದಿಲ್ಲ. ನೀನೇ ತಾತನನ್ನು ಕೇಳು' ಎಂದರು. ಮೊಮ್ಮಗ ಧೈರ್ಯದಿಂದ ತಾತನನ್ನು ಪ್ರಶ್ನಿಸಿದಾಗ ಅವರು ಈ ರೀತಿ ಉತ್ತರ ಕೊಟ್ಟರು.

"ಬಹುಮಾನದ ವಿಷಯ ಇವತ್ತಿನದು. ನಾಳೆಗೆ ಅದು ಹಳೆಯದಾಗುತ್ತದೆ. ಆದರೆ ನನ್ನ ಪ್ರಭಾವದಿಂದ ನಿನಗೆ ಬಹುಮಾನ ಸಿಕ್ಕಿತೆಂಬ ಮಾತು ಶಾಶ್ವತವಾಗಿ ಉಳಿದುಬಿಡುತ್ತದೆ. ನಮ್ಮ ನಡವಳಿಕೆ, ಆಚಾರ ದೋಷ ಮುಕ್ತವಾಗಿರಬೇಕು, ಪ್ರಾಮಾಣಿಕವಾಗಿರಬೇಕು. ಇತರರು ಬೆರಳು ತೋರಿಸಿ ದೂಷಿಸುವಂತಿರಬಾರದು. ಅದು ಬಹಳ ಮುಖ್ಯ. ಕೆಲಸ ಯಾವುದೇ ಆಗಿರಲಿ ಅದನ್ನು ನೀನು ಎಷ್ಟು ಚೆನ್ನಾಗಿ ಮಾಡುತ್ತೀಯ ಎನ್ನುವುದು ಮುಖ್ಯವೇ ಹೊರತು ಯಾವ ಕೆಲಸ ಎನ್ನುವುದಲ್ಲ."

ಮೊಮ್ಮಗನಿಗೆ ಶ್ರೀಕಂಠಯ್ಯ 'ನಿಮ್ಮ ತಾಯಿಯ ಆರೋಗ್ಯ ಚೆನ್ನಾಗಿಲ್ಲ. ನೀನು ವೈದ್ಯನಾದರೆ ಮನೆಯವರಿಗೆ ಪ್ರಯೋಜನವಾಗುತ್ತದೆ. ಆದರೆ ಹಣ ಸಂಪಾದನೆಗಾಗಿ ವೈದ್ಯನಾಗಬೇಡ. ಬಡರೋಗಿಗಳ ಸೇವೆ ಮಾಡಿ ನಿನ್ನ ವೃತ್ತಿ ಹಾಗೂ ಬದುಕನ್ನು ಸಾರ್ಥಕ ಪಡಿಸಿಕೊ' ಎಂದು ಹೇಳಿ ಅವನನ್ನು ಮೈಸೂರಿನಲ್ಲಿರುವ ವೈದ್ಯಕೀಯ ಕಾಲೇಜಿಗೆ ಸೇರಿಸಿದರು. ಆದರೆ ಆರು ತಿಂಗಳಿನಲ್ಲಿ ಇಹಲೋಕ ತ್ಯಜಿಸಿದರು. ಆ ಮೊಮ್ಮಗ ಖ್ಯಾತ ನ್ಯೂಟ್ರಿಷನ್ ವೈದ್ಯರಾಗಿ, ಸಂಶೋಧಕರಾಗಿ ಅನೇಕ ಸಂಶೋಧಕರಿಗೆ ಮಾರ್ಗದರ್ಶಕ ರಾಗಿದ್ದನ್ನು ಅವರು ನೋಡಿ ಸಂತೋಷಪಡಲಿಲ್ಲ.

ಶ್ರೀಕಂಠಯ್ಯ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ತೆಗೆದುಕೊಳ್ಳದೆ ಇಬ್ಬರು ತಮ್ಮಂದಿರಿಗೆ ಹಂಚಿದರು. ಒಬ್ಬನೇ ಮಗ ತಮ್ಮಯ್ಯನಿಗೆ ಮದುವೆ ಮಾಡಿ ಎಂದು ಬಂಧುಮಿತ್ರರು ಒತ್ತಾಯಿಸಿದರು. ಕೆಲವರು ಹೆಣ್ಣು ಕೊಡಲು ಮುಂದೆ ಬಂದರು ತಂಗಿಯ ಮಗಳೇ ಸೊಸೆಯಾಗಲು ಸಮ್ಮತಿಸಿದಳು. 'ಕುರುಡನಾದರೇನಂತೆ, ಮಗನಿಗೆ ಮದುವೆ ಮಾಡಿ ಅವನು ನಿಮಗೆ ಒಬ್ಬನೇ ಮಗ, ಅವನಿಂದಲೆ ನಿಮ್ಮ ವಂಶ ಬೆಳೆಯಬೇಕು' ಎಂದು ಕೆಲವರು ಸಲಹೆ ನೀಡಿದರು.

ಯಾವ ಹೆಣ್ಣೂ ಮನಃಪೂರ್ವಕವಾಗಿ ಕುರುಡನನ್ನು ಮದುವೆಯಾಗು ವುದಿಲ್ಲ. ನಾನು ೨೮ ನೇ ವಯಸ್ಸಿನಲ್ಲಿ ಬ್ರಹ್ಮಚಾರಿಯಾದೆ. ಆದರೆ ನನ್ನ ಮಗ ಆಜನ್ಮ ಬ್ರಹ್ಮಚಾರಿಯಾಗಿರುತ್ತಾನೆ" ಎಂದು ಉತ್ತರಿಸಿ ಮಗನಿಗೆ ಮದುವೆ ಮಾಡುವ ಆಲೋಚನೆಯನ್ನೆ ಮನಸ್ಸಿನಿಂದ ಹೊರಗೆ ಹಾಕಿದರು.

ಅವರು ಹಲವಾರು ವರ್ಷ ಬೆಂಗಳೂರಿನಲ್ಲಿ ಮತ್ತು ಮೈಸೂರಿನಲ್ಲಿದ್ದರೂ ಸ್ವಂತ ಮನೆ ಮಾಡದೆ ಬಾಡಿಗೆ ಮನೆಯಲ್ಲೆ ವಾಸ ಮಾಡಿದರು. ತಮ್ಮ ಕಾಲಾನಂತರ ಮಗ ಯಾರಿಗೂ ಹೊರೆಯಾಗಬಾರದೆಂದು ಆತನ ಹೆಸರಿನಲ್ಲಿ ಮೈಸೂರಿನ ಚಾಮರಾಜಪುರಂ ಬಡಾವಣೆಯಲ್ಲಿದ್ದ ಹಳೆಯ ಮನೆಯನ್ನು ಖರೀದಿಸಿ ಅಲ್ಲಿ ಕೆಲವು ವರ್ಷ ಮಗ, ಮಗಳೊಡನೆ ವಾಸ ಮಾಡಿದರು. ತಮ್ಮಯ್ಯ ತಂದೆಯ ಜೊತೆಯಲ್ಲಿದ್ದು ಅವರ ನಿಧನದ ನಂತರ ಅಕ್ಕ ಶಾರದಮ್ಮನ ಜೊತೆ, ಅವರ ನಿಧನದ ನಂತರ ಹೈದರಾಬಾದಿನಲ್ಲಿದ್ದ ಅಕ್ಕನ ಮಗ ಡಾ: ಶ್ರೀಕಂಠಯ್ಯನ ಮನೆಯಲ್ಲಿದ್ದು ೬೩ ನೇ ವಯಸ್ಸಿನಲ್ಲಿ ಸ್ವರ್ಗಸ್ಥರಾದರು.

ಶಾರದಮ್ಮ ಮಕ್ಕಳೊಡನೆ ತಂದೆಯ ಮನೆಯಲ್ಲಿ ರಕ್ಷಣೆ ಪಡೆದರು. ಕ್ರಮೇಣ ತಮ್ಮ ದೌರ್ಭಾಗ್ಯವನ್ನು ಬದಿಗಿಟ್ಟು ಮಕ್ಕಳ ಬೆಳವಣಿಗೆಯಲ್ಲಿ ಆಸಕ್ತರಾದರು. ತಂದೆಯ ಸಾಹಿತ್ಯ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಅವರ ಸ್ನೇಹಿತರನ್ನೆಲ್ಲ ಪ್ರೀತಿಯಿಂದ ಬರಮಾಡಿಕೊಂಡು ಔತಣ ಹಾಗೂ ಚರ್ಚಾಕೂಟ ಏರ್ಪಡಿಸುತ್ತಿದ್ದರು. ಶ್ರೀಕಂಠಯ್ಯ ಮಗಳನ್ನು ಸಾಹಿತ್ಯ ಸಮ್ಮೇಳನಗಳಿಗೆ, ಸಭೆ ಸಮಾರಂಭಗಳಿಗೆ ತಮ್ಮೊಂದಿಗೆ ಕರೆದೊಯ್ಯುತ್ತಿದ್ದರು. ಅದಕ್ಕೆ ಕಾರಣವಿತ್ತು. ಆಕೆ ಸದಾ ಮನೆಯಲ್ಲಿದ್ದು ತಂದೆ, ತಮ್ಮ ಮತ್ತು ಮಕ್ಕಳ ಊಟ ಉಪಚಾರಗಳ ಬಿಡುವಿಲ್ಲದ ಕೆಲಸಗಳಲ್ಲಿ ನಿರತರಾಗಿದ್ದು ಯಾಂತ್ರಿಕ, ಒಂದು ರೀತಿಯ ನೀರಸವಾದ ಬದುಕು ನಡೆಸುತ್ತಿದ್ದರು. ಅದರಿಂದ ಆಕೆಗೆ ಮುಕ್ತಿ ಸಿಕ್ಕಲೆಂದು ತಮ್ಮೊಂದಿಗೆ ಕರೆದೊಯ್ಯುತ್ತಿದ್ದರು. ಮಗಳ ಸುಖ, ನೆಮ್ಮದಿ ತಮ್ಮ ಆದ್ಯ ಕರ್ತವ್ಯವೆಂದು ತಿಳಿದಿದ್ದರು. ಮನೆಯಲ್ಲೆ ಆಗಾಗ ಸಾಹಿತ್ಯ ಕಾರ್ಯಕ್ರಮಗಳನ್ನು ಏರ್ಪಡಿಸಿ ಇತರರನ್ನು ನಗಿಸುತ್ತ ತಾವೂ ನಗುತ್ತ ಆಹ್ಲಾದಕರ ವಾತಾವರಣವನ್ನು ಸೃಷ್ಟಿಸುತ್ತಿದ್ದರು.

ಕನ್ನಡನಾಡು, ನುಡಿಯ ಪ್ರಚಾರಕ್ಕಾಗಿ ಉಪನ್ಯಾಸ ನೀಡಲು ಶ್ರೀಕಂಠಯ್ಯ ನಾಡಿನಾದ್ಯಂತ ಪ್ರವಾಸ ಮಾಡುತ್ತಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದಾಗ ನಾಡಿನಾದ್ಯಂತ ಸಂಚರಿಸಿ ಸಾಹಿತ್ಯಗಳ ಸಾಕ್ಷರತೆಗೆ ಒತ್ತುಕೊಟ್ಟರು. ಪ್ರಯಾಣದ ಖರ್ಚನ್ನೂ ನಿರೀಕ್ಷಿಸದೆ ಕರೆದ ಕಡೆಗಳಿಗೆಲ್ಲ ಹೋಗಿ ಬರುತ್ತಿದ್ದರು. ಎತ್ತಿನ ಗಾಡಿಯಲ್ಲಿ ಮಣ್ಣಿನ ರಸ್ತೆಗಳ ಮೇಲೆ ಪ್ರಯಾಣ ಮಾಡಿ ಯಾತನೆಗೆ ಒಳಗಾಗಿದ್ದುಂಟು. ಶಾರದಮ್ಮ ತಂದೆಯ ಜೊತೆಯಲ್ಲಿದ್ದು ಅವರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು. ಆದರೂ ಸುತ್ತಾಟ, ಸಮಯಕ್ಕೆ ಸರಿಯಾಗಿ ಊಟ, ನಿದ್ರೆ, ವಿಶ್ರಾಂತಿಯಿಲ್ಲದೆ ಶ್ರೀಕಂಠಯ್ಯನವರ ಆರೋಗ್ಯ ಕೆಟ್ಟಿತು. ಮಧುಮೇಹ ಕಾಯಿಲೆಗೆ ತುತ್ತಾದರು. ಹೃದಯದ ಕಾಯಿಲೆಯೂ ಅಲ್ಪ ಪ್ರಮಾಣದಲ್ಲಿತ್ತು.

“ಸುತ್ತಾಟ ನಿಲ್ಲಿಸಿ ಆರೋಗ್ಯದ ಕಡೆ ಗಮನ ಕೊಡಿ” ಎಂದು ಅವರ ಮಿತ್ರರು, ಶಿಷ್ಯರು ಹೇಳಿದ ಮಾತನ್ನು ಅಲಕ್ಷಿಸಿದರು.

ಕೆಲವೊಮ್ಮೆ ತಂದೆಯೊಂದಿಗೆ ಪ್ರವಾಸ ಮಾಡುವುದು ಶಾರದಮ್ಮನವರಿಂದ ಸಾಧ್ಯವಾಗುತ್ತಿರಲಿಲ್ಲ. ಆಗ ಅವರ ಪ್ರಯಾಣದ ಚೀಲದಲ್ಲಿ ಸೇಬು, ಕಿತ್ತಳೆ ಹಣ್ಣುಗಳನ್ನಿಟ್ಟು 'ಹಸಿವಾದಾಗ ಉಪವಾಸ ಮಾಡದೆ ಈ ಹಣ್ಣುಗಳನ್ನು ತಿನ್ನಿ,

ಮಾತ್ರೆ ತೆಗೆದುಕೊಳ್ಳುವುದನ್ನು ಮರೆಯಬೇಡಿ' ಎಂದು ತಂದೆಗೆ ಹೇಳುವುದನ್ನು ಅಕೆ ಮರೆಯುತ್ತಿರಲಿಲ್ಲ. ಯಾಕೆಂದರೆ ಕನ್ನಡದ ಕೆಲಸದ ಗಡಿಬಿಡಿಯಲ್ಲಿ ಅವರು ಹಸಿವು, ಬಾಯಾರಿಕೆ, ನಿದ್ರೆ ಮತ್ತು ಮಾತ್ರೆಗಳನ್ನು ಮರೆಯುತ್ತಾರೆ ಎನ್ನುವುದು ಆಕೆಗೆ ತಿಳಿದಿತ್ತು.

ಇಂಗ್ಲಿಷ್ ಮತ್ತು ಕನ್ನಡದ ಪ್ರಾಧ್ಯಾಪಕರಾಗಿದ್ದ ಶ್ರೀಕಂಠಯ್ಯ ಐರೋಪ್ಯ ಖಂಡದ ಗ್ರೀಕ್, ಲ್ಯಾಟಿನ್, ಫ್ರೆಂಚ್, ಜರ್ಮನ್, ಇಟಾಲಿಯನ್ ಭಾಷೆಗಳ ಉನ್ನತ ಕೃತಿಗಳ ಇಂಗ್ಲಿಷ್ ರೂಪಕಗಳನ್ನು ಅಧ್ಯಯನ ಮಾಡಿದರು. ಆಂಗ್ಲರ ರೀತಿ, ನೀತಿ ಆಲೋಚನೆಗಳು ಹೇಗೆ ವಿಕಾಸಗೊಂಡಿದೆ ಎನ್ನುವುದನ್ನು ಸಾಹಿತ್ಯದ ರಚನೆಯ ಮೂಲಕ ಅರ್ಥೈಸಲು ಪ್ರಯತ್ನಿಸಿದರು. ಸಂಸ್ಕೃತ ಕಲಿತು ಉಪನಿಷತ್ತು, ವೇದಗಳು, ಬ್ರಾಹ್ಮಣಗಳು, ಕಾಳಿದಾಸನ ನಾಟಕಗಳನ್ನು ಓದಿದರು. ಹೆಚ್ಚಿಲ್ಲವಾದರೂ ಹತ್ತು ಕೃತಿಗಳನ್ನು ರಚಿಸಿದರು. ಪ್ರತಿಯೊಂದು ಕೃತಿಯೂ ಪ್ರಯೋಗವೇ, ಚಿರಂತನ ಮೌಲ್ಯವುಳ್ಳದ್ದಾಗಿದೆ.

೧-೧೧-೧೯೩೮ ರಿಂದ ೨೧-೧೨-೧೯೪೨ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದು ಪರಿಷತ್ತಿನ ಚಟುವಟಿಕೆಗಳು ನಾಡಿನಾದ್ಯಂತ ವಿಸ್ತರಿಸುವಂತೆ ಮಾಡಿದರು. ಹಲವಾರು ಯೋಜನೆಗಳನ್ನು ಹಮ್ಮಿಕೊಂಡರು. 'ಕನ್ನಡ ನುಡಿ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿ 'ಕನ್ನಡ ಬಾವುಟ' ಎಂಬ ಕವನ ಸಂಕಲನವನ್ನು ಸಂಪಾದಿಸಿದರು. ಮಹಿಳಾ ಶಾಖೆ ಪ್ರಾರಂಭಿಸಿದರು. ಕನ್ನಡ ಸಾಹಿತ್ಯ ಪರೀಕ್ಷೆಗಳನ್ನು ಸಾಹಿತ್ಯದ ವ್ಯಾಸಂಗಕ್ಕಾಗಿ ಯೋಜಿಸಿದರು. ನಂತರ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ವಯಸ್ಕ ಶಿಕ್ಷಣಕ್ಕೆ ನಾಂದೀ ಸ್ವರೂಪದವರಾದರು. ವಿದ್ಯೆಯ ಮಹತ್ವ ಮತ್ತು ಪ್ರಯೋಜನವನ್ನು ಎತ್ತಿ ಹಿಡಿದರು.

೧೯೪೨ ರಲ್ಲಿ ಶ್ರೀಕಂಠಯ್ಯನವರಿಗೆ ಸರ್ಕಾರದ ಕೆಲಸದಿಂದ ನಿವೃತ್ತಿ ಯಾಯಿತು. ಅವರನ್ನು ಧಾರವಾಡದ 'ಕರ್ನಾಟಕ ಎಜುಕೇಷನ್ ಬೋರ್ಡ್' ಸ್ಥಾಪಿಸಿದ ಆರ್ಟ್ಸ್ ಕಾಲೇಜಿನ ಪ್ರಾಂಶುಪಾಲರ ಹುದ್ದೆಯನ್ನು ಅಲಂಕರಿಸ ಬೇಕೆಂದು ಆಹ್ವಾನಿಸಲಾಯಿತು. ಅನಾರೋಗ್ಯದ ಸಮಸ್ಯೆಯಿದ್ದರೂ ಇತರರ ಬಲವಂತಕ್ಕೆ ಒಪ್ಪಿ ಮಗಳು, ಮಗನೊಡನೆ ಧಾರವಾಡಕ್ಕೆ ಪ್ರಯಾಣ ಮಾಡಿದರು. ಕಾಲೇಜಿನ ಅಭಿವೃದ್ಧಿಗೆ ಹಲವಾರು ಯೋಜನೆಗಳನ್ನು ರೂಪಿಸಿದರು. ಬಿ.ಎ. ತರಗತಿ ಪ್ರಾರಂಭಿಸಿ, ಕನ್ನಡ, ಇಂಗ್ಲಿಷ್, ಮತ್ತು ಸಂಸ್ಕೃತ ಭಾಷೆಗಳನ್ನು ಕಲಿಯುವಂತೆ ವಿದ್ಯಾರ್ಥಿಗಳಲ್ಲಿ ವಿನಂತಿಸಿಕೊಂಡರು.

ಅಮೋಘವಾದ ಉಪನ್ಯಾಸಗಳನ್ನು ನೀಡುತ್ತಿದ್ದ ಅವರನ್ನು ಗದಗು, ಬಾಗಿಲ ಕೋಟೆ. ವೀರಾಜಪೇಟೆ. ಸೊಲ್ಲಾಪುರ, ಪುಣೆ ಮುಂತಾದ ಊರುಗಳಿಂದ ಆಹ್ವಾನಿಸಲಾಯಿತು. ಆ ಊರುಗಳಿಗೆ ಪ್ರಯಾಣ ಮಾಡಿ ಉಪನ್ಯಾಸಗಳ ಮೂಲಕ ಜನರ ಮನಸ್ಸನ್ನು ಗೆದ್ದರು. 'ಉಪನಿಷತ್ತಿನ ಪ್ರಾರ್ಥನೆಗಳು' ಎಂಬ ವಿಷಯ ಕುರಿತು ಎರಡು ಘಂಟೆ ಇಂಗ್ಲಿಷಿನಲ್ಲಿ ಮಾತನಾಡಿದಾಗ ಅದು ಕೇವಲ ಮಾತಾಗಿರದೆ ಅವರ ಆತ್ಮಾನುಭವದ ಗೀತವಾಗಿತ್ತು. ಸಾಂಗ್ಲಿಯಲ್ಲಿ ಒಂದೇ ದಿನ ನಾಲ್ಕು ಕಡೆಗಳಲ್ಲಿ ಉಪನ್ಯಾಸ ಮಾಡಿ ಆಯಾಸದಿಂದ ಬಳಲಿದರು. ಅವರ ಶಿಷ್ಯರಾಗಿದ್ದ ಎಸ್.ವಿ.ರಂಗಣ್ಣನವರು 'ನಿಮ್ಮ ಆರೋಗ್ಯ ಚೆನ್ನಾಗಿಲ್ಲ ಭಾಷಣಕ್ಕಾಗಿ ಊರೂರು ಸುತ್ತಾಡುವುದನ್ನು ನಿಲ್ಲಿಸಿ ವಿಶ್ರಾಂತಿ ತೆಗೆದುಕೊಳ್ಳಿ' ಎಂದು ಎಚ್ಚರಿಸಿದಾಗ 'ಕನ್ನಡ ನಾಡಿನ ಪ್ರತಿಯೊಂದು ಅಂಗುಲ ಭೂಮಿಯನ್ನು ಸ್ಪರ್ಶಿಸಿ ಅಲ್ಲಿಯ ಕನ್ನಡಿಗರನ್ನು ಭೇಟಿ ಮಾಡಿ ಅವರಲ್ಲಿ ನಾಡು ನುಡಿಯ ಬಗ್ಗೆ ಪ್ರೀತಿ, ಅಭಿಮಾನ ಹುಟ್ಟುವಂತೆ ಮಾಡುವುದು ನನ್ನ ಗುರಿ' ಎಂದು ಉತ್ತರಿಸಿದರು.

೧೯೪೬ ನೇ ಇಸವಿ, ಜನವರಿ ತಿಂಗಳು, ಐದನೆಯ ದಿನ ಶನಿವಾರ ಶ್ರೀಕಂಠಯ್ಯ ಮೈತುಂಬ ಶಾಲು ಹೊದ್ದು ಮಲಗಿದ್ದರು. ಎರಡು ತಿಂಗಳಿಂದ ಅವರ ಆರೋಗ್ಯ ಸರಿಯಾಗಿರಲಿಲ್ಲ. ಅವರ ಯೋಗಕ್ಷೇಮ ವಿಚಾರಿಸಲು ಮಿತ್ರರಾದ ಡಾ. ರಂ. ಶ್ರೀ. ಮುಗಳಿ ಮತ್ತು ಧಾರವಾಡಕರ್ ಮಧ್ಯಾಹ್ನ ಸುಮಾರು ಎರಡು ಗಂಟೆಗೆ ಅವರ ಮನೆಗೆ ಹೋದಾಗ ಅಪರೂಪದ ಮುಗುಳ್ನಗೆಯಿಂದ ಬರಮಾಡಿ ಕೊಂಡರು. ಮೊದಲು ಕುಶಲ ಪ್ರಶ್ನೆಯಾಯಿತು. ನಂತರ ಮಾತು ಮುಂದಕ್ಕೆ ಸಾಗಿತು.

"ತಿರುಗಾಟ ಹೆಚ್ಚಾಗಿ ಆಯಾಸ ಮಾಡಿಕೊಂಡಿರಿ" ಎಂದರು ಮುಗಳಿ.

ಆಗಲೂ ಶ್ರೀಕಂಠಯ್ಯ ತಮ್ಮ ಅನಾರೋಗ್ಯ ಕುರಿತು ಚಿಂತಿಸದೆ ಕಾಲೇಜಿನ ಭವಿಷ್ಯ ಕುರಿತು ಹೇಳಿದರು.

'ಈ ವರ್ಷ ಕಾಲೇಜಿನಲ್ಲಿ ಬಿ.ಎ. ಪ್ರಾರಂಭಿಸಬೇಕು. ವಿಶ್ವವಿದ್ಯಾನಿಲಯಕ್ಕೆ ಅರ್ಜಿ ಹಾಕಿದ್ದೇನೆ'. ವಿದ್ಯಾರ್ಥಿಗಳಿಗೆ ಆರ್ಟ್ಸ್‌ಗಿಂತ ವಿಜ್ಞಾನದಲ್ಲಿ ಹೆಚ್ಚಿನ ಆಸಕ್ತಿಯಿರುವಂತಿದೆ. ವಿಜ್ಞಾನ ವಿಭಾಗವನ್ನು ಬೆಳೆಸದೆ ಯಾವ ವಿದ್ಯಾಲಯವೂ ಬೆಳೆಯುವುದು ಅಶಕ್ಯ'

"ನನ್ನ 'ರನ್ನನ ಕೃತಿರತ್ನ' ಪುಸ್ತಕಕ್ಕೆ ತಾವು ಮುನ್ನುಡಿ ಬರೆಯಲು ಒಪ್ಪಿದ್ದು ತಿಳಿದು ಸಂತೋಷವಾಯಿತು. ಪ್ರಕಾಶಕರು ಪ್ರಕಟಣೆಯ ದಿನವೊಂದನ್ನು ಗೊತ್ತು

ಮಾಡಿದ್ದಾರೆ. ಅಷ್ಟರೊಳಗೆ ನೀವು ಬರೆಯುವುದು ಎಷ್ಟರಮಟ್ಟಿಗೆ ಸಾಧ್ಯವೆಂದು ನಾನೇ ಮುಂದಾಗಿ ನಿಮಗೆ ಬರೆಯಲಿಲ್ಲ. ತಾವು 'ಗದಾಯುದ್ಧ'ವನ್ನು ಆಳವಾಗಿ ಓದಿ ತಿಳಿದವರು. ನನ್ನ 'ಕೃತಿರತ್ನ'ವನ್ನು ಓದಿದ ಮೇಲೆ ತಮ್ಮ ಅಭಿಪ್ರಾಯ ನನಗೆ ಬೇಕು' ಎಂದರು.

"ಅಯ್ಯೋ, ಇಂಗ್ಲಿಷ್ ವ್ಯಾಸಂಗದಲ್ಲಿ ನಾನು ಆಯುಷ್ಯ ಕಳೆಯಬೇಕಾಯಿತು. ಕನ್ನಡ ಓದಲು ನಿಮಗಿದ್ದ ಸಮಯ ನನಗೆ ದೊರೆಯಲಿಲ್ಲ. ಮುನ್ನುಡಿಯನ್ನು ಸಂತೋಷದಿಂದ ಬರೆಯುತ್ತೇನೆ" ಎಂದರು ಶ್ರೀಕಂಠಯ್ಯ.

ಶಾರದಮ್ಮ ಎಲ್ಲರಿಗೂ ಚಹ ತಂದುಕೊಟ್ಟರು. ಚಹ ಕುಡಿಯುತ್ತಲೆ ಮಾತು ಮುಂದುವರಿಯಿತು.

"ಈಗ ನನಗೆ ಚೆನ್ನಾಗಿ ತಿರುಗಾಡುವಂತಾಗಿದೆ. ಸೋಮವಾರದಿಂದ ಕ್ಲಾಸುಗಳಿಗೆ ಪಾಠ ಹೇಳಿಕೊಡಬೇಕೆಂದಿದ್ದೇನೆ" ಎಂದರು ಶ್ರೀಕಂಠಯ್ಯ. ಮತ್ತೆ ಮಾತು ಮುಂದುವರಿಸಿ 'ಮದ್ರಾಸ್ ಸಮ್ಮೇಳನಕ್ಕೆ ಈ ಸಲ ನಾನು ಹೋಗಲಿಲ್ಲ. ಮಿತ್ರರು ಬಹಳ ಕರೆದರು. ದೇಹಸ್ಥಿತಿ ಹೋಗಗೊಡಲಿಲ್ಲ. ನನ್ನ ಮನಸ್ಸೆಲ್ಲಾ ಅಲ್ಲೇ ಇತ್ತು. ಪರಿಷತ್ತಿನ ಸಾಮಾನ್ಯ ಅಧಿವೇಶನದಲ್ಲಿ ನಮ್ಮ ನಾಡನ್ನು ಕೆಲವು ಪ್ರದೇಶಗಳಾಗಿ ಹಂಚಿ ಪ್ರದೇಶ ಸಮಿತಿಗಳನ್ನು ಸ್ಥಾಪಿಸಬೇಕೆಂದು ತೀರ್ಮಾನ ವಾಯಿತಂತೆ. ಅದು ನನಗೆ ಸಂತೋಷದ ವಿಷಯ."

"ನಿಜ, ನಿಮ್ಮ ಬಹುದಿನದ ಕನಸು ಇಂದು ನನಸಾಗಿದೆ" ಎಂದರು ಮುಗಳಿಯವರು.

ಸಮಯ ಎರಡೂವರೆ ಗಂಟೆಯಾಗಿತ್ತು. ಬಂದಿದ್ದ ಮಿತ್ರರು ಹೊರಡಲು ಎದ್ದು ನಿಂತಾಗ ಶ್ರೀಕಂಠಯ್ಯ ಹಾಸಿಗೆಯಲ್ಲಿ ಮಲಗಿದಲ್ಲಿಯೇ ತುಸು ಎದ್ದಂತೆ ಮಾಡಿ ಕೈ ಕುಲುಕಿ ಒರಗಿದರು. ಮುಗಳಿಯವರು ಮತ್ತು ಧಾರವಾಡಕರ್ ಕೊಠಡಿಯಿಂದ ಹೊರಗೆ ನಡೆದರು.

ತಂದೆಯ ಯೋಗಕ್ಷೇಮ ವಿಚಾರಿಸಲು ಶಾರದಮ್ಮ ಕೊಠಡಿಗೆ ಬಂದಾಗ ಅವರು ಒಂದು ಕ್ಷಣ ಮಗಳನ್ನು ನೋಡಿ ಕಣ್ಮುಚ್ಚಿದರು. ಅದೇ ಅವರ ಅಂತಿಮ ನೋಟವಾಗಿತ್ತು. ಗಾಬರಿಯಿಂದ ಆಕೆ ಮುಗಳಿಯವರೆ, ಬನ್ನಿ, ಬೇಗ ಬನ್ನಿ ಎಂದು ಕೂಗಿಕೊಂಡರು. ಮೆಟ್ಟಿಲಿಳಿಯುತ್ತಿದ್ದ ಮುಗುಳಿಯವರು ಮನೆಯೊಳಗೆ ಧಾವಿಸಿದರು. ಮನೆಯ ಸಮೀಪದಲ್ಲಿದ್ದ ಡಾಕ್ಟರ್ ಕಮಲಾಕರ್ ಶ್ರೀಕಂಠಯ್ಯನವರನ್ನು ಪರೀಕ್ಷಿಸಿ ನಿರಾಶೆಯಿಂದ ತಲೆಯಾಡಿಸಿದರು.

ಶ್ರೀಕಂಠಯ್ಯನವರ ಹೃದಯ ಕ್ರಿಯೆಯನ್ನು ನಿಲ್ಲಿಸಿದ ಮೃತ್ಯು ಅವರನ್ನು ನಿಷ್ಕರುಣೆಯಿಂದ ತನ್ನ ಸ್ವಾಧೀನಕ್ಕೆ ತೆಗೆದುಕೊಂಡುಬಿಟ್ಟಿತ್ತು. ಬರಸಿಡಿಲೆರಗಿದ ಮರದ ಮೇಲಿರುವ ಹಕ್ಕಿಗಳ ಹಿಂಡು ಕಿರುಚುವಂತೆ ಶಾರದಮ್ಮ ಗೋಳಾಡಿದರು. ಊರಿನ ಗಣ್ಯರು, ಅಧ್ಯಾಪಕರುಗಳು, ಸಾಹಿತಿಗಳು ಅಭಿಮಾನಿಗಳು, ವಿದ್ಯಾರ್ಥಿಗಳು ಅವರ ಪಾರ್ಥಿವ ಶರೀರದ ದರ್ಶನ ಪಡೆದು ಕಣ್ಣೀರಿಟ್ಟರು. ಆದರೆ ತನ್ನ ಜೀವನಕ್ಕೆ ಏಕೈಕ ಆಧಾರವಾಗಿದ್ದ ತಂದೆ ನಿಧನರಾದಾಗಲೂ ಗೊಮ್ಮಟನಂತೆ ನಿಂತು, ಕಣ್ಣಿನಲ್ಲಿ ಒಂದು ಹನಿ ನೀರಿಲ್ಲದ ಮಗ ತಮ್ಮಯ್ಯ 'ಸಮಾಧಾನ ಮಾಡ್ಕೊಳ್ಳಿ' ಎಂದು ಎಲ್ಲರನ್ನೂ ಸಂತೈಸುತ್ತಿದ್ದರು. ಅದನ್ನು ನೋಡಿದವರೆಲ್ಲ ಬೆರಗಾದರು. ಆ ದೃಶ್ಯಕ್ಕೆ ಸಾಕ್ಷಿಯಾದ ಡಾ. ರಂ. ಶ್ರೀ. ಮುಗಳಿಯವರು 'ಶ್ರೀಕಂಠಯ್ಯನವರು ಕಂಡ ಬಾಳಿನ ಒಳಗಣ್ಣು ಈ ಪುತ್ರರತ್ನದಲ್ಲಿದೆ' ಎಂದು ತೀರ್ಮಾನಿಸಿ ತಮ್ಮನ್ನು ಆ ಶೋಕದ ವಾತಾವರಣದಲ್ಲಿ ಸಂತೈಸಿಕೊಂಡರು.

ಅವರು ನಿಧನರಾದ ಮಾರನೆಯ ದಿನ ಮೈಸೂರು ಆಕಾಶವಾಣಿಯಲ್ಲಿ ಕುವೆಂಪು ಮಾಡಿದ ಭಾಷಣವಿದು–

"ಬಿ.ಎಂ.ಶ್ರೀ ಕನ್ನಡ ಸಾಹಿತ್ಯ ಸರ್ವೋದಯಕ್ಕೆ ನಾಂದೀ ಸ್ವರೂಪರಾದವರು. ಕನ್ನಡದ ಬಾವುಟವನ್ನು ತೋಳು ನೀಡಿ ನಭಕ್ಕೆತ್ತಿದವರು, ಕನ್ನಡದ ಏಳ್ಗೆಗಾಗಿ, ಕನ್ನಡದ ಬಾಳ್ಗೆಗಾಗಿ ನಾನಾರಂಗಗಳಲ್ಲಿ ಅನೇಕ ವಿಧಾನಗಳಲ್ಲಿ ಉಸಿರ್ಕಟ್ಟಿ ಒಮ್ಮನಸ್ಸಿನಿಂದ ಹೋರಾಡಿದವರು. ಬಾಳ್ ಕನ್ನಡ ತಾಯ್, ಏಳ್ ಕನ್ನಡ ತಾಯ್, ಆಳ್ ಕನ್ನಡ ತಾಯ್! ಎಂದು ಕೊರಳೆತ್ತಿ ಕೂಗಿದವರು, ಕೈ ಬೀಸಿ ಕರೆದವರು, ತೆರಪಿಲ್ಲದೆಚ್ಚರಿಸಿದವರು, ಹುರಿದುಂಬಿಸಿದವರು, ಹಾರೈಸಿದವರು, ಹರಸಿದವರು. ನಿನ್ನೆ ಹಗಲು ದೇಹ ತ್ಯಾಗ ಮಾಡಿದರಂತೆ, ಕನ್ನಡಮ್ಮನಿಗಾಗಿ ಬಹಿರಂಗವಾಗಿಯೂ ಅಂತರಂಗವಾಗಿಯೂ ಅನೇಕ ತ್ಯಾಗಗಳನ್ನು ಮಾಡಿದ ಆ ಮಹಾದಾನಿಗೆ ಇದು ಕೊನೆಯ ತ್ಯಾಗ, ಈ ಶರೀರ ತ್ಯಾಗ.

ಕೊನೆಯದೆಂದು ಹೇಳುವುದು ನಮ್ಮ ಲೋಕ ವ್ಯವಹಾರ ದೃಷ್ಟಿಯಿಂದ ಮಾತ್ರ. ಏಕೆಂದರೆ ಅಮರಾತ್ಮದ ಅನಂತಯಾತ್ರೆಗೆ ಕೊನೆ ಎಲ್ಲಿ? ಯಾವುದು ಅನಂತವೋ ಅದರ ಅನಂತ ಸಾಹಸಗಳಿಗೆ ಅಂತ್ಯವೆಲ್ಲಿ? ಆದ್ದರಿಂದ ಅದು ಕಡೆಯದೂ ಅಲ್ಲ ಕೊನೆಯದೂ ಅಲ್ಲ. ಕೈಕೊಂಡ ಕಾರ್ಯವನ್ನು ಮುಂದುವರಿಸುವ ಸಲುವಾಗಿ, ಕನ್ನಡದ ಅಭ್ಯುದಯ ಸಾಧನೆಗೆ

ಸ್ವರ್ಗವೇದಿಕೆಯಲ್ಲಿ ಸೊಂಟ ಕಟ್ಟುವ ಸಲುವಾಗಿ, ಅಲ್ಲಿಯ ದೈವತಾಶೀರ್ವಾದ ಶಕ್ತಿಗಳನ್ನು ಇಲ್ಲಿಗೆ ಆಮಂತ್ರಿಸುವುದಕ್ಕಾಗಿ, ನಮ್ಮ ಇಲ್ಲಿಯ ಸಾಧನೆಗೆ ಅಲ್ಲಿಯ ಕೃಪಾ ಸಹಾಯವನ್ನು ಸಂಪಾದಿಸುವುದಕ್ಕಾಗಿ ಪೂಜ್ಯ ಶ್ರೀಕಂಠಯ್ಯನವರು ಅಶರೀರ ಯಾತ್ರೆ ಹೋಗಿದ್ದಾರೆ. ಯಾರು ಹೇಳಿದರು ಅವರು ಮಡಿದರೆಂದು? ಈ ಬದುಕಿನಿಂದ ಆ ಬದುಕಿಗೆ ವರ್ಗವಾಗಿದ್ದಾರೆ."

ಕನ್ನಡಕ್ಕಾಗಿ ದುಡಿದು ಮುನ್ನಡೆದ ಮಹನೀಯರೊಡನೆ ಸೇರಿದ್ದಾರೆ. ಕಾರ್ಯಾರ್ಥವಾಗಿಯೆ ಕಳೆದವರಿಗಾಗಿ ಅಳುವುದು ಲೋಕದ ರೂಢಿ. ಆದರೆ ಚಿರಂಜೀವಿಯಾದ 'ಶ್ರೀ' ಯವರಿಗಾಗಿ ನಾವು ಅಳುವುದು ಸಲ್ಲ. ಏತಕ್ಕೆ ಅಳು? ನಶ್ವರ ಹೋಯಿತು ಶಾಶ್ವತ ತೇಜಸ್ಸಿನ ಶಾಶ್ವತ ವೈಭವಕ್ಕಾಗಿ ಇಂದು ಶ್ರೀಕಂಠಯ್ಯನವರು ಹಿಂದಿಗಿಂತಲೂ ನೂರ್ಮಡಿಯಾಗಿ ಬದುಕಿದ್ದಾರೆ! ನಮ್ಮೆದೆಯಲ್ಲಿ ಉಕ್ಕುತ್ತಿರುವ ಗೌರವ ಭಾವವೇ ಅದನ್ನು ಸಮರ್ಥಿಸುತ್ತಿದೆ. ನಮ್ಮ ಹೃದಯ ಭೂಮಿಕೆಯಲ್ಲಿ ಹೆಡೆಯೆತ್ತುತ್ತಿರುವ ದಿವ್ಯೋಲ್ಲಾಸದ ಅಗ್ನಿಶೇಷವೇ ಅದಕ್ಕೆ ಸಾಕ್ಷಿ!

ಆಚಾರ್ಯ ಶ್ರೀಕಂಠಯ್ಯನವರು ದೇಹ ಬಂಧನದಿಂದ ವಿಮುಕ್ತರಾಗಿ, ಏಕಕಾಲದಲ್ಲಿ ನಮ್ಮೆಲ್ಲರೊಡನೆಯೂ ಯಾವಾಗಲೂ ಇರುವ ದಿವ್ಯಸ್ಥಿತಿಗೇರಿದ್ದಾರೆ.



ಭಾಗ-೨

# ಬಿ.ಎಂ.ಶ್ರೀ. ಉದ್ಯೋಗ

೧೯೦೯ : ಮೈಸೂರು ಮಹಾರಾಜ ಕಾಲೇಜಿನಲ್ಲಿ ಪರೀಕ್ಷಾರ್ಥಕ ಇಂಗ್ಲಿಷ್ ಅಧ್ಯಾಪಕರಾಗಿ ನೇಮಕಗೊಂಡರು.

೧೨-೧-೧೯೧೦ : ಇಂಗ್ಲಿಷ್ ಅಧ್ಯಾಪಕರು.

೧-೧-೧೯೧೪ : ಇಂಗ್ಲಿಷ್ ಸಹಾಯಕ ಪ್ರಾಧ್ಯಾಪಕರು

೧೯-೨-೧೯೧೯ : ಹಂಗಾಮಿ ಕೆಳದರ್ಜೆಯ ಪ್ರಾಧ್ಯಾಪಕರು

೧-೭-೧೯೨೬ : ಎರಡನೆಯ ದರ್ಜೆ ಇಂಗ್ಲಿಷ್ ಪ್ರಾಧ್ಯಾಪಕರು

೧-೧೧-೧೯೨೬ ರಿಂದ೧-೭-೧೯೩೦ : ಮೈಸೂರು ವಿಶ್ವವಿದ್ಯಾನಿಲಯದ ವಿಲೇಖನಾಧಿಕಾರಿ (Registrar)

೨-೧೧-೧೯೨೬ : ಗೌರವ ಕನ್ನಡ ಪ್ರಾಧ್ಯಾಪಕರು

೧-೭-೧೯೩೦ : ಪ್ರಥಮ ದರ್ಜೆಯ ಪ್ರಾಧ್ಯಾಪಕರು

೧೫-೮-೧೯೩೦ : ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರು.

೧೯೪೨ : ಸರ್ಕಾರದ ವೃತ್ತಿಯಿಂದ ನಿವೃತ್ತಿ.

೧೯೪೪ ಜುಲೈನಿಂದ ೫-೧-೧೯೪೬ ರವರೆಗೆ ಧಾರವಾಡದ ಕೆ.ಇ. ಬೋರ್ಡ್ ಆರ್ಟ್ಸ್ ಕಾಲೇಜಿನಲ್ಲಿ ಪ್ರಾಂಶುಪಾಲರು.

**ಶಿಕ್ಷಕರು :**

ಬಿ.ಎಂ.ಶ್ರೀ.ಯವರಲ್ಲಿ ಶಿಕ್ಷಕರಿಗೆ ಅಗತ್ಯವಾಗಿ ಇರಬೇಕಾದ ಶಾರೀರಿಕ, ಮಾನಸಿಕ ಗುಣ ವಿಶೇಷವೆಲ್ಲವೂ ಮನೆ ಮಾಡಿದ್ದವು. ದಂತದ ಮೈಬಣ್ಣ, ವಿಶೇಷ ಮೈಕಟ್ಟು, ಸುಂದರ ವದನ, ಸೊಗಸಾದ ಕಂಠಶ್ರೀ, ಗಂಭೀರವಾದ ವ್ಯಕ್ತಿತ್ವ, ಒಟ್ಟಾರೆ ನೋಡಲು ಆಕರ್ಷಕವಾಗಿದ್ದರು. ಕಾಲೇಜಿಗೆ ಸೂಟು ಇಲ್ಲವೆ ಕ್ಲೋಸ್ ಕಾಲರ್ ಕೋಟು, ಷರಾಯಿ ಧರಿಸಿ ತಲೆಗೆ ಜರತಾರಿ ಪೇಟ

ಹಾಕುತ್ತಿದ್ದರು. ಪಾಠ ಮಾಡುವಾಗ ವೇದಿಕೆಯ ಮೇಲೆ ಓಡಾಡುತ್ತ ಕೋಟಿನ ಮೂರನೆಯ ಗುಂಡಿಯನ್ನು ಎಡಗೈಲಿ ತಿರುಗಿಸುತ್ತಿದ್ದರು.

ಅವರು ಇಂಗ್ಲಿಷ್, ಕನ್ನಡ, ಸಂಸ್ಕೃತ, ತಮಿಳು ಮತ್ತು ಗ್ರೀಕ್ ಭಾಷೆಗಳನ್ನು ಕಲಿತು ಆ ಭಾಷೆಗಳ ಮೇರು ಕೃತಿಗಳನ್ನು ಅಧ್ಯಯನ ಮಾಡಿದ್ದರು. ಇಂಗ್ಲಿಷ್ ಭಾಷೆಯಲ್ಲಿ ಪೂರ್ಣ ವಿದ್ವಾಂಸರಾಗಿದ್ದರು. ಈ ವಿಸ್ತಾರದ ಭಾಷಾ ಜ್ಞಾನದ ಫಲವಾಗಿ ಕನ್ನಡ ಹೇಗೆ ಬೆಳೆಯಬೇಕು, ಕನ್ನಡದ ಪದಗಳು ಹೇಗಿರಬೇಕು, ವಾಕ್ಯದ ಧಾಟಿ ಹೇಗಿರಬೇಕು, ಗ್ರಂಥದ ರಚನೆ ಹೇಗಿರಬೇಕು ಎಂಬ ವಿಚಾರಗಳ ಬಗ್ಗೆ ತೀರ್ಮಾನಿಸಿದ್ದರು. ಕನ್ನಡದಲ್ಲಿ ಕೇವಲ ಪುರಾಣ, ಪುಣ್ಯಕಥೆಗಳಿದ್ದರೆ ಸಾಲದು, ದೇಶವಿದೇಶಗಳ ಚರಿತ್ರೆಗಳು, ವಿಜ್ಞಾನಶಾಸ್ತ್ರ ಕುರಿತ ಹೊಸ ಹೊಸ ಗ್ರಂಥಗಳು ಕನ್ನಡದಲ್ಲಿ ಹುಟ್ಟಬೇಕೆಂದು ಅಪೇಕ್ಷಿಸಿದ್ದರು.

ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೆ ವಿಶ್ವಸಾಹಿತ್ಯವನ್ನು, ವಿಮರ್ಶಾ ಕೃತಿಗಳನ್ನು ಆಳವಾಗಿ ಅಭ್ಯಾಸ ಮಾಡಿ ಅವುಗಳ ಸತ್ವವನ್ನು ಸಂಗ್ರಹಿಸಿದ್ದರು. ಷೇಕ್ಸ್‌ಪಿಯರ್ ನಾಟಕಗಳನ್ನು ಹಲವಾರು ಬಾರಿ ಓದಿಕೊಂಡಿದ್ದರು. ಇಂಗ್ಲಿಷ್ ಮೂಲಕ ಇತರ ಪಾಶ್ಚಾತ್ಯ ಮತ್ತು ಪೌರಸ್ತ್ಯ ಸಾಹಿತ್ಯ, ಕಲೆ, ಸಂಸ್ಕೃತಿ, ಸಾಧನೆಗಳನ್ನು ಚೆನ್ನಾಗಿ ಮನಗಂಡಿದ್ದರು. ಧರ್ಮದ ಸ್ವರೂಪವನ್ನು, ತಿರುಳನ್ನು ಅರ್ಥಮಾಡಿ ಕೊಂಡಿದ್ದರು. ಧರ್ಮ ಸಮ್ಮೇಳನಗಳಲ್ಲಿ ಭಾಗವಹಿಸುತ್ತಿದ್ದರು. ತಮಿಳು ಭಾಷೆಯನ್ನು ಕಲಿತು ಆ ಭಾಷೆಯ ಕೆಲವು ಪ್ರಸಿದ್ಧ ಕೃತಿಗಳನ್ನು ಅನುವಾದಿಸಲು ಪ್ರಯತ್ನಿಸಿದ್ದರು. ಗ್ರೀಕ್ ನಾಟಕಗಳನ್ನು ಮೂಲದಲ್ಲೆ ಓದಬಲ್ಲವರಾಗಿದ್ದರು. ಪಾಶ್ಚಾತ್ಯ ವಿಮರ್ಶೆಯ ವಿನೂತನ ವಿಧಾನಗಳನ್ನು ಕನ್ನಡಿಗರಿಗೆ ಪರಿಚಯಿಸಿದರು.

ಬೋಧನಾ ಕಲೆಯಲ್ಲಿ ನಿಪುಣರಾಗಿದ್ದು ಕರ್ತವ್ಯದಲ್ಲಿ ನಿಷ್ಠೆಯುಳ್ಳವರಾಗಿದ್ದು ಸಮಯಕ್ಕೆ ಸರಿಯಾಗಿ ತರಗತಿಗೆ ಹಾಜರಾಗುತ್ತಿದ್ದರು. ನೂರಾರು ವಿದ್ಯಾರ್ಥಿ ಗಳಲ್ಲದೆ ಇತರ ಕಾಲೇಜುಗಳ ವಿದ್ಯಾರ್ಥಿಗಳು, ಅಧ್ಯಾಪಕರುಗಳು ಅವರ ತರಗತಿಗಳಿಗೆ ಆಗಮಿಸುತ್ತಿದ್ದರು. ತಂದೆ ಮಕ್ಕಳಿಗೆ ಹೇಳಿಕೊಡುವಂತೆ ಪಾಠ ಮಾಡುತ್ತಿದ್ದರು. ಅವರ ತರಗತಿಗಳು ಕೇವಲ ಅರವತ್ತು ನಿಮಿಷಗಳಲ್ಲದೆ ಕೆಲವೊಮ್ಮೆ ನೂರಿಪ್ಪತ್ತು, ನೂರೆಂಭತ್ತು ನಿಮಿಷಗಳಾಗುತ್ತಿತ್ತು. ಮೂರು ಗಂಟೆ ಪಾಠ ಮಾಡಿದರೂ ಯಾರೂ ಬೇಸರಗೊಳ್ಳುತ್ತಿರಲಿಲ್ಲ.

ಅವರಿಗೆ ಪ್ರಿಯವಾಗಿದ್ದ ಬ್ರೌನಿಂಗ್ ಕವಿತೆಗಳನ್ನು ಆಳವಾಗಿ ಅಭ್ಯಾಸಮಾಡಿ ಬೋಧಿಸುತ್ತಿದ್ದರು. ಕಾವ್ಯದಲ್ಲಿದ್ದ ಅಪೂರ್ವ ಹಾಗೂ ಕಠಿಣ ಪದಗಳ ಅರ್ಥವನ್ನು ತಿಳಿಸಿ ವಿವರಿಸುತ್ತಿದ್ದರು. ಒಂದು ಕವಿತೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು

ಅದರ ಗುಣ. ಲಕ್ಷಣ. ಸ್ವರೂಪಗಳನ್ನು ತಿಳಿದುಕೊಳ್ಳಬೇಕೆನ್ನುತ್ತಿದ್ದರು. ಕಾವ್ಯಗಳನ್ನು ಭಾವಪೂರ್ಣವಾಗಿ ಓದುತ್ತಿದ್ದುದರಿಂದ ಅರ್ಥ ಸ್ಫುರಿಸುತ್ತಿತ್ತು. ಪಾತ್ರಗಳು ಜೀವಂತವಾಗುತ್ತಿದ್ದವು.

ವಿದ್ಯಾರ್ಥಿಗಳನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಿ, ಆಯ್ಕೆ ಮಾಡಿದ ಕೆಲವು ಕವನಗಳನ್ನು ಕೊಟ್ಟು ಪರಸ್ಪರ ಹೋಲಿಸಿ ಎಂದು ಹೇಳಿ ವಿಂಗಡಣೆಯ ತತ್ವ ಬೋಧಿಸುತ್ತಿದ್ದರು. ಸಮಗ್ರ ಕಾವ್ಯವನ್ನು ಒಂದು ನೋಟದಲ್ಲಿ ಪರಿಚಯ ಮಾಡಿಸುವುದು ಅವರ ಅಪರೂಪದ ಬೋಧನಾಕ್ರಮವಾಗಿತ್ತು.

ನಾಟಕಗಳನ್ನು ಬೋಧಿಸುವಾಗ ಪಾತ್ರಗಳನ್ನು ಸೊಗಸಾಗಿ ಅಭಿನಯಿಸಿ ತೋರಿಸುತ್ತಿದ್ದರು. ನಾಟಕಗಳನ್ನು ಕುರಿತು ಪ್ರಬಂಧ ಬರೆಯುವಂತೆ ವಿದ್ಯಾರ್ಥಿಗಳಿಗೆ ಸೂಚಿಸುತ್ತಿದ್ದರು. ಅವರ ಪ್ರಬಂಧಗಳ ದೃಷ್ಟಿ, ವಾಕ್ಯರಚನೆ, ವಿಷಯ ಶೈಲಿ. ನಿರೂಪಣೆಯನ್ನು ಕುರಿತು ವಿಮರ್ಶಿಸುತ್ತಿದ್ದರು. ಕಾಳಿದಾಸನ 'ಶಾಕುಂತಲ' ನಾಟಕ ಬೋಧಿಸುವಾಗ ಅದರ ಇಂಗ್ಲಿಷ್ ಭಾಷಾಂತರವನ್ನು ಆಧಾರವಾಗಿಟ್ಟು ಕೊಂಡು ಮೂಲಕೃತಿಯಲ್ಲಿರುವ ಸೊಗಸನ್ನು ಅನಾವರಣಗೊಳಿಸುತ್ತಿದ್ದರು. ವರ್ಡ್ಸ್‌ವರ್ತ್ ಕವಿತೆಯನ್ನೋ ಷೇಕ್ಸ್‌ಪಿಯರ್ ನಾಟಕವನ್ನೋ ಬೋಧಿಸುತ್ತಿದ್ದರೆ ವಿದ್ಯಾರ್ಥಿಗಳಿಗೆ ಸಮಯ ನಿಂತುಹೋದಂತೆ ಭಾಸವಾಗುತ್ತಿತ್ತು.

ಕಾದಂಬರಿಯ ಸ್ವರೂಪ. ಕಾದಂಬರಿಗೂ ಸಣ್ಣ ಕಥೆಗೂ ಇರುವ ಹೋಲಿಕೆ, ವ್ಯತ್ಯಾಸ ಇತ್ಯಾದಿಗಳನ್ನು ಬೋಧಿಸಿ ವಿದ್ಯಾರ್ಥಿಗಳ ಸಂದೇಹಗಳನ್ನು ನಿವಾರಿಸುತ್ತಿದ್ದರು. ಕನ್ನಡ ಸಾಹಿತ್ಯ ಚರಿತ್ರೆ. ಭಾಷಾ ಚರಿತ್ರೆ, ಕಾಲ್ಪನಿಕ ವ್ಯಾಕರಣ, ಭಾಷಾ ವಿಜ್ಞಾನ. ದ್ರಾವಿಡ ಛಂದಸ್ಸು ಮುಂತಾದ ವಿಷಯಗಳನ್ನು ಕುರಿತು ಪಾಠ ಮಾಡುವಾಗ ಅದರ ಚಾರಿತ್ರಿಕ ಆವರಣ, ಇತಿಮಿತಿ, ಅದಕ್ಕೆ ಸಂಬಂಧಪಟ್ಟ ತತ್ವದರ್ಶನ. ಅದರಲ್ಲಿ ಯಾವುದು ಪ್ರಧಾನ, ಯಾವುದು ಗೌಣ ಎಂಬ ವಿಚಾರಗಳನ್ನು ಗಮನದಲ್ಲಿಟ್ಟುಕೊಳ್ಳುತ್ತಿದ್ದರು.

ಪ್ರಬಂಧ ಬರೆಯುವಾಗ ದೊಡ್ಡ ದೊಡ್ಡ ಪದಗಳಿಗೆ ಬದಲು ಸರಳವಾದ ಪದಗಳನ್ನು ಬಳಸಿ. ಸರಳತೆ. ನಿಖರತೆಗೆ ಪ್ರಾಮುಖ್ಯತೆ ಕೊಡಿ ಎಂದು ಬರಹಗಾರರಿಗೆ ಹೇಳುತ್ತಿದ್ದರು. ಸಾವಿರಾರು ವಿದ್ಯಾರ್ಥಿಗಳಿಗೆ ಅತ್ಯುತ್ತಮ ಶಿಕ್ಷಕರಾಗಿ ವಿದ್ಯಾರ್ಜನೆ ಮಾಡಿ. ಸ್ಫೂರ್ತಿ ತಂದುಕೊಟ್ಟು ಸಾಹಿತ್ಯದ ಸಂಸ್ಕಾರವನ್ನುಂಟು ಮಾಡಿದರು.

"ಯಾವ ರೀತಿಯ ಅಡಚಣೆಯಿಲ್ಲದೆ ಗಂಭೀರವಾಗಿ ಅವರ ವಾಕ್ಪ್ರವಾಹ, ಇಂಪಾದ ಪದಪುಂಜಗಳು. ಉಪಮೆ ರೂಪಗಳು, ಒಂದು ಅಭಿಪ್ರಾಯವನ್ನು

ವಿವರಿಸಲು ನಾಲ್ಕಾರು ಪರ್ಯಾಯ ಪದಗಳನ್ನು ಬಳಸುತ್ತಿದ್ದ ವೈಖರಿ, ಹತ್ತು ವಾಕ್ಯಗಳಲ್ಲಿ ವಿವರಿಸಬಹುದಾದ ಅಭಿಪ್ರಾಯವನ್ನು ನಾಲ್ಕೇ ಪದಗಳಲ್ಲಿ ಸೆರೆಹಿಡಿದ ಸಾರೋಕ್ತಿಗಳು, ಇವೆಲ್ಲಕ್ಕೂ ಶೃತಿಯಂತಿದ್ದ ಅವರ ಕಂಠಶ್ರೀ ಇದನ್ನು ಮರೆಯಲಾಗದು" ಎಂದು ಅವರ ಶಿಷ್ಯರಾಗಿದ್ದ ಎ.ಎನ್.ಮೂರ್ತಿರಾಯರು ಲೇಖನವೊಂದರಲ್ಲಿ ಉಲ್ಲೇಖಿಸಿದ್ದಾರೆ.

೧೯೧೪ ರಲ್ಲಿ ಬಿ.ಎಂ.ಶ್ರೀ ಮೈಸೂರು ಮಹಾರಾಜ ಕಾಲೇಜಿನಲ್ಲಿ ಸಹಾಯಕ ಪ್ರಾಧ್ಯಾಪಕರಾಗಿದ್ದಾಗ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು Notes on Rhetoric ಎಂಬ ಪಠ್ಯಪುಸ್ತಕವನ್ನು ಪ್ರಕಟಿಸಿದರು. ಆ ಪುಸ್ತಕದ ಪ್ರಯೋಜನವನ್ನು ಭಾರತದ ಇತರ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳೂ ಪಡೆದುಕೊಂಡರು. ಇಂಗ್ಲಿಷ್ ಭಾಷೆಯನ್ನು ಬೋಧಿಸುವುದು ಬ್ರಿಟಿಷ್‌ರಿಂದ ಮಾತ್ರ ಸಾಧ್ಯ ಎಂಬುದು ಅಂದಿನ ಕಾಲೇಜಿನ ಆಡಳಿತದವರ ನಂಬಿಕೆಯಾಗಿತ್ತು. ಹಾಗಾಗಿ ಅವರಿಗೆ ಬಹಳ ವರ್ಷ ಹಿರಿಯ ಪ್ರಾಧ್ಯಾಪಕ ಹುದ್ದೆಗೆ ಬಡ್ತಿ ನೀಡಲಿಲ್ಲ. ೧೯೨೯ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ವಿಲೇಖನಾಧಿಕಾರಿಯಾಗಿ ನೇಮಕ ಮಾಡಲಾಯಿತು. ಅದೇ ಸ್ಥಾನದಲ್ಲಿ ೧-೭-೧೯೩೦ ರವರೆಗೆ ಸೇವೆ ಸಲ್ಲಿಸಿ ನಂತರ ಇಂಗ್ಲಿಷ್ ಪ್ರಾಧ್ಯಾಪಕರಾದರು.

ಬಿ.ಎಂ.ಶ್ರೀ. ಗೊತ್ತಾದ ಅವಧಿಯಲ್ಲಿ ಪಾಠಗಳನ್ನು ಮುಗಿಸುತ್ತಿದ್ದರು. ಸಾಧ್ಯವಾಗದಿದ್ದರೆ ವಿಶೇಷ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. 'ಇಂಗ್ಲಿಷ್ ಸೆಮಿನಾರ್' ಎಂಬ ವ್ಯಾಸಂಗ ಗೋಷ್ಠಿಯನ್ನು ಸ್ಥಾಪಿಸಿ ವಾರಕೊಮ್ಮೆ ಉತ್ತಮ ಕೃತಿಗಳನ್ನು ಚರ್ಚೆಗೆ ಆಯ್ದುಕೊಳ್ಳಲಾಗುತ್ತಿತ್ತು. ವರ್ಡ್ಸ್ ವರ್ತ್‌ನ 'Preface to Lyrical Ballads' ಮ್ಯಾಥ್ಯೂ ಆರ್ನಾಲ್ಡ್‌ನ 'Culture and Anarchy' ಮುಂತಾದ ಕೃತಿಗಳ ಬಗ್ಗೆ ಯಾರಾದರೂ ಒಬ್ಬ ವಿದ್ಯಾರ್ಥಿ ಪ್ರಧಾನ ಪ್ರಬಂಧವನ್ನು ಮಂಡಿಸುತ್ತಿದ್ದರು. ಅದರ ಬಗ್ಗೆ ಚರ್ಚೆ ನಡೆದ ನಂತರ ಬಿ.ಎಂ.ಶ್ರೀ. ಸಮಾರೋಪ ಮಾಡುತ್ತಿದ್ದರು. ಅವರ ಭಾಷಣ ಒಂದು ರಸದೌತಣವಾಗಿರುತ್ತಿತ್ತು.

ವರ್ಷದ ಅಂತ್ಯದಲ್ಲಿ ಇಂಟರ್‌ಮೀಡಿಯಟ್ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕ ವಾಗಿರುತ್ತಿದ್ದ ಷೇಕ್ಸ್‌ಪಿಯರ್ ನಾಟಕ ಕುರಿತು Revision ಉಪನ್ಯಾಸ ಕೊಡುತ್ತಿದ್ದರು. ತಮ್ಮೊಂದಿಗೆ ಇತರ ಶಿಕ್ಷಕರಿಂದ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು.

ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಸ್ವತಃ ಪಂಡಿತರಾಗಿದ್ದ ಬ್ರಿಜೇಂದ್ರನಾಥ್‌ಶೀಲ್ ಬಿ.ಎಂ.ಶ್ರೀ.ಯವರ ಆಪ್ತರೂ,

ಅಭಿಮಾನಿಗಳಾಗಿದ್ದು ಅವರ ಕನ್ನಡ ಭಾಷೆಯ ಬೆಳವಣಿಗೆಗಾಗಿ ದುಡಿಯಬೇಕೆಂಬ ಆಕಾಂಕ್ಷೆಯನ್ನು ಅರಿತು ಕನ್ನಡಕ್ಕಾಗಿ ಒಂದು ಪ್ರತ್ಯೇಕ ವಿಭಾಗವನ್ನು ತೆರೆದು ಕನ್ನಡ ಭಾಷೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪರಿಚಯಿಸುವ ಸಾಧ್ಯತೆಗಳ ಬಗ್ಗೆ ಬಿ.ಎಂ.ಶ್ರೀ.ಯವರಲ್ಲಿ ಸಮಾಲೋಚನೆ ನಡೆಸಿದರು. ಬಿಡುವಿನ ಸಮಯದಲ್ಲಿ ಆ ಯೋಜನೆಯನ್ನು ಕುರಿತು ತಯಾರಿ ನಡೆಸಿದರು. ಒಂದು ವರ್ಷದಲ್ಲಿ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಬಿ.ಎ. ಮತ್ತು ಕನ್ನಡ ಎಂ.ಎ. ಪದವಿಗಳನ್ನು ತೆರೆಯಲು ಸಮ್ಮತಿಸಿದರು.

ಬ್ರಿಜೇಂದ್ರನಾಥರು ಬಿ.ಎಂ.ಶ್ರೀ.ಯವರಿಗೆ ಒಂದು ಷರತ್ತನ್ನು ವಿಧಿಸಿದರಂತೆ. ಕನ್ನಡ ವಿಭಾಗದ ಮುಖ್ಯಸ್ಥರಾಗಿ ಮತ್ತು ಗೌರವ ಕನ್ನಡ ಪ್ರಾಧ್ಯಾಪಕರಾಗಿ ಬಿ.ಎಂ.ಶ್ರೀ ಒಪ್ಪಿಕೊಂಡರೆ ಮಾತ್ರ ಕನ್ನಡ ಸ್ನಾತಕೋತ್ತರ ವಿಭಾಗ ತೆರೆಯಲು ಸಮ್ಮತಿ ಕೊಡಲಾಗುವುದು ಎಂದು ಹೇಳಿದರಂತೆ. ಬಿ.ಎಂ.ಶ್ರೀ ಸಮ್ಮತಿಸಿದರು, ಜುಲೈ ೧ನೇ ತಾರೀಖು ೧೯೨೭ನೇ ಇಸವಿಯಲ್ಲಿ ಎಂ.ಎ. ತರಗತಿಗಳು ಪ್ರಾರಂಭವಾದವು. ಬ್ರಿಜೇಂದ್ರನಾಥರು ಕನ್ನಡ ವಿಭಾಗದ ಮುಖ್ಯಸ್ಥ ಹಾಗೂ ಪ್ರಾಧ್ಯಾಪಕ ಸ್ಥಾನಕ್ಕೆ ಬಿ.ಎಂ.ಶ್ರೀ. ಯವರ ಹೆಸರನ್ನು ಸೂಚಿಸಿದರು ಆಗ ಅವರು ಇಂಗ್ಲಿಷ್ ಪ್ರಾಧ್ಯಾಪಕರಾಗಿ ಮತ್ತು ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುವ ತಮ್ಮ ಇಚ್ಛೆಯನ್ನು ಆಡಳಿತ ಸಮಿತಿಯ ಮುಂದಿಟ್ಟರು. ಮಹಾರಾಜರು ಅವರ ಇಚ್ಛೆಗೆ ಸಮ್ಮತಿಸಿದರೂ ಇಂಗ್ಲಿಷ್ ಪ್ರಾಧ್ಯಾಪಕರ ಸ್ಥಾನ ಖಾಲಿಯಿರಲಿಲ್ಲ ವಾಗಿ ಬಿ.ಎಂ.ಶ್ರೀ. ಕೆಳದರ್ಜೆಯ ಪ್ರಾಧ್ಯಾಪಕರಾಗಿಯೇ ಮುಂದುವರಿಯ ಬೇಕಾಯಿತು.

ಕನ್ನಡ ಬೋಧಿಸುವ ಪ್ರಾಧ್ಯಾಪಕರಿಲ್ಲದೆ ಆ ಸ್ಥಾನ ಬಿ.ಎಂ.ಶ್ರೀ. ಯವರ ಸ್ವತ್ತಾಯಿತು. ಇಂಗ್ಲಿಷ್ ಮತ್ತು ಕನ್ನಡ ಸ್ನಾತಕೋತ್ತರ, ಈ ಎರಡೂ ವಿಭಾಗದ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಮತ್ತು ಕನ್ನಡ ಬೋಧಿಸುತ್ತಿದ್ದ ಅವರು ಮೊದಲಿಗಿಂತ ಎರಡುಪಟ್ಟು ಶ್ರಮವಹಿಸಬೇಕಾಯಿತು. ಕನ್ನಡ ವಿಭಾಗ ಅವರ ಉಪನ್ಯಾಸಗಳಿಂದ ಜನಪ್ರಿಯವಾಯಿತು. ವಿಚಾರ ಗೋಷ್ಠಿಯಲ್ಲಿ ವಾರಕ್ಕೊಮ್ಮೆ ಉತ್ತಮ ಕನ್ನಡ ಸಾಹಿತ್ಯ ಕೃತಿಗಳಾದ ನಳದಮಯಂತಿ, ನಚಿಕೇತ ಪ್ರಸಂಗ, ಸಾವಿತ್ರಿ, ಯಾಜ್ಞವಲ್ಕ್ಯ ಮೈತ್ರೇಯಿ ಮುಂತಾದ ಕೃತಿಗಳನ್ನು ಕುರಿತು ಚರ್ಚಿಸಲಾಗುತ್ತಿತ್ತು. ನಂತರ ಅವುಗಳನ್ನು ಕುರಿತು ಬರೆದಿದ್ದ ವಿದ್ಯಾರ್ಥಿಗಳ ಲೇಖನಗಳನ್ನು ಚಿಂತನೆಗೆ ಒಳಪಡಿಸಲಾಗುತ್ತಿತ್ತು. ಅವರು ಕೇವಲ ಅಧ್ಯಾಪಕರಾಗಿರದೆ ಗೋಷ್ಠಿಯ

ಸ್ಫೂರ್ತಿಯಾಗಿ, ಮಾರ್ಗದರ್ಶಕರಾಗಿ ಅಂತ್ಯದಲ್ಲಿ ಸಮಾರೋಪ ಭಾಷಣ ಮಾಡುತ್ತಿದ್ದರು. ವಿದ್ಯಾರ್ಥಿಗಳ ಪ್ರಬಂಧಗಳನ್ನು ಓದಿ ತಪ್ಪುಗಳನ್ನು ಇತರರಿಗೆ ಗೊತ್ತಾಗದಂತೆ ತಿದ್ದುತ್ತಿದ್ದರು. ಮೂಲಗ್ರಂಥಗಳ ಹೆಸರನ್ನು ಸೂಚಿಸಿ ಓದುವಂತೆ ಸಲಹೆ ನೀಡುತ್ತಿದ್ದರು. ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಕನ್ನಡ ವಿಭಾಗದ ಗೌರವ ಪ್ರಾಧ್ಯಾಪಕರಾಗಿದ್ದ ಬಿ.ಎಂ.ಶ್ರೀ. ಭಾಷಣ ಕಲೆಯಲ್ಲಿ ನಿಪುಣರಾಗಿದ್ದರು. ಇಂಗ್ಲಿಷ್ ತರಗತಿಯಲ್ಲಿ ಕನ್ನಡ ಪದಗಳನ್ನು, ಕನ್ನಡದ ತರಗತಿಯಲ್ಲಿ ಇಂಗ್ಲಿಷ್ ಪದಗಳನ್ನು ಬಳಸುತ್ತಿರಲಿಲ್ಲ. ಸಭೆ, ಸಮಾರಂಭಗಳಲ್ಲಿ ಮೊದಲು ಇಂಗ್ಲಿಷ್‌ನಲ್ಲೆ ಭಾಷಣ ಮಾಡುತ್ತಿದ್ದು ಕ್ರಮೇಣ ಕನ್ನಡದಲ್ಲಿ ಭಾಷಣ ಮಾಡಿ ಸಭಿಕರನ್ನು ವಿಸ್ಮಯ ಗೊಳಿಸಿದರು. ಕನ್ನಡಿಗರ ಮನೆ ಮಾತಾದರು 'ನೀವೇಕೆ ಇಂಗ್ಲಿಷ್‌ನಲ್ಲಿ ಮಾತನಾಡುತ್ತೀರಿ? ಎಂದು ಇಂಗ್ಲಿಷ್‌ನಲ್ಲಿ ಮಾತನಾಡುತ್ತಿದ್ದ ಬಿ.ಎಂ.ಶ್ರೀ. ಯವರನ್ನು ಸಭಿಕರಲ್ಲೊಬ್ಬ ಪ್ರಶ್ನಿಸಿದಾಗ 'ಯಾಕೆಂದರೆ ಇಂಗ್ಲಿಷ್ ಭಾಷೆಯ ಬಗ್ಗೆ ಮೋಹವಿರುವವರಿಗೆ ಕನ್ನಡ ಭಾಷೆಯ ಬಗ್ಗೆ ಗೌರವ ಮೂಡುತ್ತದೆ' ಎಂದು ಉತ್ತರಿಸಿದರಂತೆ.

ಅವರು ಆಶುಭಾಷಣಕಾರರು. ಪೂರ್ವಸಿದ್ಧತೆ ಅವರಿಗೆ ಅಗತ್ಯವಿರಲಿಲ್ಲ. ಅವರ ಪಾಠ ಪ್ರವಚನಗಳು ವಿದ್ಯಾರ್ಥಿಗಳನ್ನು ಬೆರಗುಗೊಳಿಸುತ್ತಿದ್ದವು. ಅಸಮಾನ್ಯ, ಅಪರೂಪದ ಶಿಕ್ಷಕರಾಗಿ ಕನ್ನಡಿಗರ ಮನೆ ಮಾತಾದರು.

೧೯೩೦ ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರ ಸ್ಥಾನ ತೆರವಾಯಿತು. ಆ ಸ್ಥಾನವನ್ನು ಬಿ.ಎಂ.ಶ್ರೀ. ಅಲಂಕರಿಸಬೇಕೆಂದು ಮಹಾರಾಜರು ಆಶಿಸಿದರು. ಶ್ರಮವಹಿಸಿ ಸೇವೆ ಸಲ್ಲಿಸಿದ್ದ ಮಹಾರಾಜ ಕಾಲೇಜನ್ನು ತೊರೆದು ಬೆಂಗಳೂರಿಗೆ ಅವರು ಹೊರಟಿದ್ದು ಅನೇಕರಿಗೆ ನೋವುಂಟುಮಾಡಿತು. ಆದರೂ ಅವರನ್ನು ಹರಿಸಿ ಬೀಳ್ಕೊಟ್ಟರು. ಜುಲೈ ೧ ರಿಂದ ಸೆಂಟ್ರಲ್ ಕಾಲೇಜಿನ ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಲು ಮುಂದಾದರು.

ಬಿ.ಎಂ.ಶ್ರೀ. ಪ್ರಚಂಡ ವಾಗ್ಮಿ. ಭಾಷಣ ಕಲೆ ಅವರ ಅಡಿಯಾಳು. ನಾಡು, ನುಡಿಯ ಪ್ರಚಾರಕ್ಕಾಗಿ ನಾಡಿನಲ್ಲೆಲ್ಲ ಸುತ್ತಾಡಿ ತಮ್ಮ ಭಾಷಣಗಳ ಮೂಲಕ ಕನ್ನಡಿಗರನ್ನು ಬಡಿದೆಬ್ಬಿಸಿದರು. ಪ್ರಥಮ ಶ್ರೇಣಿಯ ಭಾಷಣಕಾರರಾಗಿ ತಮ್ಮಲ್ಲಿದ್ದ ತಿಳುವಳಿಕೆ, ಜ್ಞಾನ ಸಂಪತ್ತು ಮತ್ತು ಪಾಂಡಿತ್ಯವನ್ನು ಭಾಷಣಗಳ ಮೂಲಕ ಧಾರೆಯೆರೆದರು.

**ಶ್ರೀಯವರ ಕೆಲವು ಪ್ರಮುಖ ಭಾಷಣಗಳು ಕೆಳಕಂಡಂತಿವೆ:**

೧೯೧೧ ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ವಾರ್ಷಿಕ ಸಭೆಯಲ್ಲಿ ಮಾಡಿದ ಭಾಷಣ.

೧೯೨೪ ಮೈಸೂರು ವಿಶ್ವವಿದ್ಯಾನಿಲಯದ 'Study Circle' ಸ್ಥಾಪನೆಯಾದ ಸಂದರ್ಭದಲ್ಲಿ ಮಾಡಿದ ಅಧ್ಯಕ್ಷ ಭಾಷಣ.

೯-೧-೧೯೨೮ ಕನ್ನಡ ಸಾಹಿತ್ಯ ಪರಿಷತ್ತಿನ ೧೪ ನೇ ಸಮ್ಮೇಳನದಲ್ಲಿ ಮಾಡಿದ ಅಧ್ಯಕ್ಷ ಭಾಷಣ.

೧೦-೫-೧೯೩೦ ಕನ್ನಡ ಸಾಹಿತ್ಯ ಪರಿಷತ್ತಿನ ೧೬ ನೇ ಸಮ್ಮೇಳನದ ಸ್ವಾಗತಾಧ್ಯಕ್ಷರ ಭಾಷಣ.

೧-೧-೧೯೩೬ ಹಂಪಿಯಲ್ಲಿ ವಿಜಯನಗರ ಸಾಮ್ರಾಜ್ಯದ ೬೦೦ ನೇ ವಾರ್ಷಿಕೋತ್ಸವದ ಅಧ್ಯಕ್ಷ ಭಾಷಣ.

೧-೧-೧೯೩೮ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಾಗ ಮಾಡಿದ ಭಾಷಣ.

೧೯೪೦ ಬೆಳಗಾವಿಯಲ್ಲಿ ಮಾಡಿದ ಭಾಷಣದ ಪ್ರಾರಂಭದಲ್ಲೆ ಮಧುರವಾದ ದನಿಯಲ್ಲಿ 'ಮೊದಲ ತಾಯ ಹಾಲು ಕುಡಿದು ಲಲ್ಲೆಯಿಂದ ತೊದಲು ನುಡಿದು' ಎಂಬ ಗೀತೆಯನ್ನು ಹಾಡಿ ಸಭೆಯನ್ನು ರಂಜಿಸಿದ ರೀತಿ ಅಮೋಘವಾಗಿತ್ತು.

೧೯೪೨ ಸರ್ಕಾರದ ವೃತ್ತಿಯಿಂದ ನಿವೃತ್ತರಾದಾಗ 'ಪ್ರವೃತ್ತಿ – ನಿವೃತ್ತಿ' ಕುರಿತು 'ಕರ್ನಾಟಕ ಸಂಘ'ದ ಆಶ್ರಯದಲ್ಲಿ ಮಾಡಿದ ಭಾಷಣ.

೧೯೪೨ ಜೂನ್ ತಿಂಗಳಲ್ಲಿ ಬೆಂಗಳೂರಿನಲ್ಲಿ ನಡೆದ ಪ್ರಥಮ ವಯಸ್ಕರ ಸಮ್ಮೇಳನದ ಅಧ್ಯಕ್ಷ ಭಾಷಣ.

೧೯೩೬ ಡಿಸೆಂಬರ್ ೨೬, ೨೭ ನೇ ತಾರೀಖು ಹಂಪಿಯಲ್ಲಿ ವೈಭವದಿಂದ ಜರುಗಿದ ವಿಜಯನಗರ ಸ್ಥಾಪನೆಯ ೬೦೦ ನೇ ಜನ್ಮೋತ್ಸವದಲ್ಲಿ ಅಧ್ಯಕ್ಷರಾಗಿದ್ದ ಬಿ.ಎಂ.ಶ್ರೀ ಅವರ ಭಾಷಣದ ಕೆಲವು ಮಾತುಗಳು ಹೀಗಿವೆ–

**"ಹಿರಿಯರೇ, ಅಕ್ಕತಂಗಿಯರೇ, ಕನ್ನಡ ತಾಯ ಮಕ್ಕಳೆ**

ಧರ್ಮ, ಕಲೆ, ಸಾಹಿತ್ಯ, ಮುಂತಾದ ಕ್ಷೇತ್ರಗಳಲ್ಲಿ ಪ್ರಪಂಚದ ಕೀರ್ತಿಗೆ ಯೋಗ್ಯವಾದ ಸ್ಥಾನ ಕನ್ನಡಕ್ಕಿದೆ. ಇಂದಿನ ಉತ್ಸವದಲ್ಲಿ ನನ್ನ ತಾಯಿ, ತಾಯಿನಾಡು, ಕನ್ನಡ ತಾಯಿ ಪ್ರತ್ಯಕ್ಷವಾಗಿ ಬಂದಿಳಿದಿರುವಳೆಂದು ನನ್ನ ಭಾವನೆ. ಮೈಸೂರಿನವರಾದ ನಾವು ಮೈಸೂರಿನಲ್ಲಿ ವಿಜಯನಗರವು ಇನ್ನೂ ಜೀವಕಳೆಯಿರುವುದೆಂದು ನಂಬಿರುವೆವು. ವಿಜಯನಗರದ ಪುಣ್ಯ ಸ್ಮರಣೆಯ

ಸಾಂಸ್ಕೃತಿಕ ಹಿನ್ನಲೆಯಲ್ಲಿ ಈ ಸಮಾರಂಭದಷ್ಟು ದೊಡ್ಡ ಸಮ್ಮೇಳನ ಅದುವರೆಗೆ, ಅನಂತರವೂ ನಮ್ಮ ನಾಡಿನಲ್ಲಿ ನಡೆದಿರಲಿಲ್ಲವೆಂದರೆ ಅತಿಶಯೋಕ್ತಿಯೆನಿಸದು... ಕನ್ನಡ ಮಂತ್ರ ಒಂದೇ ಆಗಿರಬೇಕು. ನಮ್ಮ ಕನ್ನಡ ನಾಡು, ನುಡಿ, ಸಾಮ್ರಾಜ್ಯ ಇನ್ನೊಮ್ಮೆ. ಕಟ್ಟಬೇಕಾಗಿದೆ. ನಾವೆಲ್ಲರೂ 'ಸಿರಿಗನ್ನಡಂ ಗೆಲ್ಗೆ' ಸಿರಿಗನ್ನಡಂಗೆಲ್ಗೆ ಸಿರಿಗನ್ನಡಂಗೆಲ್ಗೆ ಎಂಬುದನ್ನು ಜಪಿಸಬೇಕು."

ಆ ಸಮಾರಂಭದಲ್ಲಿ ಕನ್ನಡ ವಿದ್ವಾಂಸರು, ವಾಗ್ಮಿಗಳು, ಲೇಖಕರು, ಸಂಶೋಧಕರು, ದೇಶಾಭಿಮಾನಿಗಳು, ಕವಿಗಳು, ಗಾಯಕರು, ಶ್ರೀ ಸಾಮಾನ್ಯರು, ಒಟ್ಟು ಮೂವತ್ತು ಸಾವಿರಕ್ಕೂ ಹೆಚ್ಚು ಮಂದಿ ಭಾಗವಹಿಸಿದ್ದರು.

**ಉಪನ್ಯಾಸಗಳು**

ವಿದ್ಯಾಸಂಸ್ಥೆಗಳಲ್ಲಿ, ಸಾರ್ವಜನಿಕ ವೇದಿಕೆಯ ಮೇಲೆ ಬಿ.ಎಂ.ಶ್ರೀ ಅಸಂಖ್ಯಾತ ಉಪನ್ಯಾಸಗಳನ್ನು ನೀಡಿದ್ದಾರೆ. ವಿಶ್ವವಿದ್ಯಾನಿಲಯದ ಇಂಗ್ಲಿಷ್ ಮತ್ತು ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿ ನಾಟಕ, ಕಾವ್ಯಗಳನ್ನು ಕುರಿತು ಉಪನ್ಯಾಸ ನೀಡಿ ಕನ್ನಡಿಗರ ಮೆಚ್ಚುಗೆಗೆ ಪಾತ್ರರಾದರು. ಅವರ ಪ್ರಮುಖ ಉಪನ್ಯಾಸಗಳು ಕೆಳಕಂಡಂತಿವೆ :-

ಧಾರವಾಡದ 'ವಿದ್ಯಾವರ್ಧಕ ಸಂಘ'ದ ವಾರ್ಷಿಕೋತ್ಸವ ಸಮಾರಂಭದಲ್ಲಿ 'ಕನ್ನಡ ಮಾತು ತಲೆಯೆತ್ತುವ ಬಗೆ' ಕುರಿತು ಉಪನ್ಯಾಸ ನೀಡಿದಾಗ ಅವರ ವಯಸ್ಸು ಕೇವಲ ಇಪ್ಪತ್ತೇಳು. ಅದೇ ತಾನೆ ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕ ರಾಗಿ ನೇಮಕಗೊಂಡಿದ್ದರು. ಸಭಿಕರ ಮೇಲೆ ಅದ್ಭುತ ಪರಿಣಾಮ ಬೀರಿದ ಉಪನ್ಯಾಸವದು.

ಬೆಂಗಳೂರು ಸೆಂಟ್ರಲ್ ಕಾಲೇಜಿನ 'ಕರ್ನಾಟಕ ಸಂಘ' ದಲ್ಲಿ ರನ್ನ ಕವಿ, ಪಂಪ, ರಾಮಾಯಣ, ಭಾರತ, ಯಶೋಧರ ಚರಿತ್ರೆ, ಅಶ್ವತ್ಥಾಮನ್ ಕುಮಾರವ್ಯಾಸ, ಭಾರತ, ಗದಾಯುದ್ಧ, ಕಠೋಪನಿಷತ್ತು, ಪಾರಸಿಕರು, ಕನ್ನಡ ಛಂದಸ್ಸು, ತಮಿಳು ಮತ್ತು ಸಂಸ್ಕೃತದ 'ಶಾಕುಂತಲಾ', ಉಪನಿಷತ್ತಿನ ಪ್ರಾರ್ಥನೆಗಳು ಮುಂತಾದ ವಿಷಯಗಳನ್ನು ಕುರಿತು ಉಪನ್ಯಾಸ ನೀಡಿದರು.

೧೯೩೩ ರಲ್ಲಿ ಕೊಲ್ಲಾಪುರದ 'ಬಸವನ ಬಳಗ' ಎಂಬ ಸಂಘದಲ್ಲಿ 'ಕನ್ನಡಕ್ಕೆ ಕಟ್ಟು' 'ಸಾಮಾನ್ಯ ವಿಧಿಗಳು', 'ಶಬ್ದಕೋಶ' ಕುರಿತ ಉಪನ್ಯಾಸಗಳನ್ನು ನೀಡಿದರು.

೧೯೩೮ ರಿಂದ ೧೯೪೨ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ನಾಡಿನಾದ್ಯಂತ ಸಂಚರಿಸಿ ಭಾಷೆ, ನಾಡು, ಭಾವೈಕ್ಯತೆ, ಸಾಹಿತ್ಯ, ವಿಮರ್ಶೆ, ಸಂಶೋಧನೆ, ಹೊಸ ಸಾಹಿತ್ಯದ ಪೋಷಣೆ, ಸಮ್ಮೇಳನ, ಕನ್ನಡ ಪ್ರಜ್ಞೆ ಕುರಿತು ನೀಡಿದ ಉಪನ್ಯಾಸಗಳು ಅಸಂಖ್ಯಾತ. ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದಾಗ ಶಿಕ್ಷಣ, ವಯಸ್ಕರ ಶಿಕ್ಷಣ ಮತ್ತು ಜ್ಞಾನ ಸಂಪಾದನೆಯ ಮಹತ್ವ ಕುರಿತು ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಉಪನ್ಯಾಸಗಳನ್ನು ನೀಡಿದರು. ವಿದ್ಯಾವಂತರನ್ನು ಕಾರ್ಯ ತತ್ಪರತೆಗಾಗಿ ಹುರಿದುಂಬಿಸುತ್ತಿದ್ದರು. ಕೃಷ್ಣೆಯಿಂದ ಕಾವೇರಿಯವರೆಗೆ ಕನ್ನಡ ನಾಡನ್ನು ಸುತ್ತಿ ಉಪನ್ಯಾಸಗಳಿಂದ ಕನ್ನಡಿಗರನ್ನು ಎಚ್ಚರಿಸಿದರು.

ವಿದ್ಯಾರ್ಥಿಗಳಿಗೆ ತರಗತಿಯಲ್ಲಿ ಷೇಕ್ಸ್‌ಪಿಯರಿನ ನಾಟಕಗಳನ್ನು ಬೋಧಿಸಿದರಲ್ಲದೆ ಸಾರ್ವಜನಿಕ ವೇದಿಕೆಗಳಲ್ಲೂ ಅವನ ಕೆಲವು ನಾಟಕಗಳನ್ನು ಕುರಿತು ಉಪನ್ಯಾಸ ನೀಡಿದ್ದಾರೆ. ಒಮ್ಮೆ ನಾಟಕ ಕುರಿತು ಅವರು ನೀಡಿದ ಉಪನ್ಯಾಸ ಕೇಳಿದ ವಿದೇಶದ ಇಂಗ್ಲಿಷ್ ಸಾಹಿತ್ಯದ ವಿದ್ವಾಂಸ ಟಕಾಕುವ್ 'ಬಿಎಂ.ಶ್ರೀ. ಯವರನ್ನು ಬಿಟ್ಟರೆ ಷೇಕ್ಸ್‌ಪಿಯರ್ ನಾಟಕಗಳನ್ನು ಕುರಿತು ಉಪನ್ಯಾಸ ನೀಡುವ ಮತ್ತೊಬ್ಬ ಭಾರತೀಯರಿಲ್ಲ' ಎಂದು ಪ್ರಶಂಸಿಸಿದರಂತೆ.

ಮತ್ತೊಂದು ಸಂದರ್ಭದಲ್ಲಿ "ಅವರ 'ರಿಚರ್ಡ್' ಕೃತಿಯನ್ನು ಕುರಿತು ನೀಡಿದ ಉಪನ್ಯಾಸ ಕೇಳಿ, ಅದರಲ್ಲೂ ಜಾನ್ ಆಫ್ ಗಾಂಟ್ ಆಡಿದ ಮಾತುಗಳನ್ನು ಹೃದಯಂಗಮವಾಗಿ ವಿವರಿಸಿ ವ್ಯಾಖ್ಯಾನ ಮಾಡಿದಾಗ ನನಗೆ ಮನೋಹರವಾದ ಸಂಗೀತವನ್ನು ಕೇಳಿದ ಅನುಭವವಾಯಿತು" ಎಂದು ಅವರ ಶಿಷ್ಯರಾಗಿದ್ದ ಎ.ಎನ್. ಮೂರ್ತಿರಾವ್ ಲೇಖನವೊಂದರಲ್ಲಿ ಉಲ್ಲೇಖಿಸಿದ್ದಾರೆ.

"ಬಿ.ಎಂ.ಶ್ರೀ. ಯವರ ಉಪನ್ಯಾಸಗಳಿಂದ ವರ್ಡ್ಸ್‌ವರ್ತ್ ಮತ್ತು ಬ್ರೌನಿಂಗ್ ಕವಿಗಳ ಕಾವ್ಯ ಸೌಂದರ್ಯವನ್ನು, ತಮಿಳು ಭಾಷೆಯ ಪ್ರಬುದ್ಧತೆಯನ್ನು ನಾನು ಅರಿತುಕೊಂಡೆ" ಎಂದು ಖ್ಯಾತ ಕವಿ ಪು.ತಿ.ನರಸಿಂಹಾಚಾರ್ಯರು ಲೇಖನವೊಂದರಲ್ಲಿ ಬರೆದಿದ್ದಾರೆ.

ಅವರ ಉಪನ್ಯಾಸಗಳನ್ನು ಮೆಚ್ಚಿದ ಕಾಲೇಜಿನ ಪ್ರಾಂಶುಪಾಲರಾಗಿದ್ದ ಇಂಗ್ಲೆಂಡ್ ದೇಶದ ಪ್ರಾಧ್ಯಾಪಕ ಮ್ಯಾಕೆಂಟಾಷ್ After listening to Prof. B.M. Srikantiah , I am inclined to believe in incarnation perhaps he was a professor at oxford in his previous birth. I would like to be his student in my next birth "

ಸಾವಿರಾರು ವಿದ್ಯಾರ್ಥಿಗಳಿಗೆ ಕನ್ನಡ ಮತ್ತು ಇಂಗ್ಲಿಷ್ ಸಾಹಿತ್ಯ ಬೋಧಿಸಿ ಅವರಲ್ಲಿ ನಾಡು, ನುಡಿ ಹಾಗೂ ಅವುಗಳ ಬೆಳವಣಿಗೆಯಲ್ಲಿ ಅಭಿಮಾನ ಮೂಡಿಸಿದರು. ಸಾರ್ವಜನಿಕ ಸಭೆಗಳಲ್ಲಿ ಉಪನ್ಯಾಸಗಳನ್ನು ನೀಡಿ ಜನತೆಯ ಮಾರ್ಗದರ್ಶಕರಾದರು. ಅನೇಕ ಕವನ ಸಂಕಲನಗಳಿಗೆ, ಗ್ರಂಥಗಳಿಗೆ ಮುನ್ನುಡಿ ಬರೆದುಕೊಟ್ಟು ಲೇಖಕರನ್ನು ಪ್ರೋತ್ಸಾಹಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ಮೇಲೆ ಕನ್ನಡ ವ್ರತವನ್ನು ಹಿಡಿದರು. ಪರಿಷತ್ತು ಅವರಿಗೆ ಕನ್ನಡ ದೇವಿಯ ಗುಡಿಯಾಗಿತ್ತು. ಅವರ ಭಾಷಣಗಳು, ಉಪನ್ಯಾಸಗಳು ಇಂದು ಉಳಿದಿಲ್ಲವಾದರೂ ಕನ್ನಡದ ಜನತೆಯ ಮೇಲೆ ಪರೋಕ್ಷವಾಗಿ ಪ್ರಭಾವ ಬೀರಿದ್ದುಂಟು.

## ವಿಚಾರಗಳು

### ಭಾಷೆ

ಬಿ.ಎಂ.ಶ್ರೀ. ಬಾಳಿದ ಕಾಲ ಕನ್ನಡ ಭಾಷೆಯ ಹೀನಾವಸ್ಥೆಯ ಕಾಲ. ಕನ್ನಡ ಕನ್ನಡವೆಂದರೆ ಕನ್ನಡಿಗರಿಗೇ ಅಮುಖ್ಯವಾಗಿದ್ದು ಬೇಡವಾಗಿತ್ತು ಎಂಬ ಅರಿವು ಅವರನ್ನು ನೋಯಿಸುತ್ತಿತ್ತು. ಕನ್ನಡದ ಏಳಿಗೆಗಾಗಿ ಕನ್ನಡಿಗರನ್ನು ಚಾಟಿ ಏಟಿನಿಂದ ಬಡಿದು ಎಚ್ಚರಗೊಳಿಸಬೇಕಾಗಿದ್ದ ಕಾಲ ಯಾಕೆಂದರೆ ಆಗ ಸಂಸ್ಕೃತ ದೇವಭಾಷೆಯಾಗಿತ್ತು. ಇಂಗ್ಲಿಷ್ ರಾಜ ಭಾಷೆ, ಶ್ರೀಮಂತರ ವಿದ್ಯಾವಂತರ ಭಾಷೆಯಾಗಿತ್ತು. ಈ ಎರಡೂ ಭಾಷೆಗಳ ದಬ್ಬಾಳಿಕೆಯಲ್ಲಿ ಕನ್ನಡ ಮೂಲೆಯಲ್ಲಿ ಕುಳಿತು ನರಳುತ್ತಿತ್ತು. ಸಂಸ್ಕೃತ ವಿದ್ವಾಂಸರು, ಕನ್ನಡದಲ್ಲೇನಿದೆ ಸ್ವಾರಸ್ಯ, ಅದು ಸಂಸ್ಕೃತದ ಎಂಜಲು, ಉಗಿದ ಕಬ್ಬಿನ ಸಿಪ್ಪೆ' ಎಂದು ಕಡೆಗಣಿಸುತ್ತಿದ್ದರು. ಯಾವ ಪುರುಷಾರ್ಥಕ್ಕಾಗಿ ಕನ್ನಡ ಕಲಿಯಬೇಕೆಂದು ಪ್ರಶ್ನಿಸುತ್ತಿದ್ದರು.

ಭಾಷೆಯ ವಿಚಾರದಲ್ಲಿ ಬಿ.ಎಂ.ಶ್ರೀ. ಅವರದು ದೂರದೃಷ್ಟಿ. ಭಾಷೆ ಕೇವಲ ಅಂಗಡಿಯಲ್ಲಿ ವ್ಯಾಪಾರ ಮಾಡುವುದಕ್ಕೆ ಸಾಧ್ಯವಾಗುವ ಸಾಧಕವಲ್ಲ, ಬದಲು ಒಂದು ಇಡೀ ಸಮುದಾಯದ ಸಂಸ್ಕಾರಕ್ಕೆ, ಮುನ್ನಡೆಗೆ ಅತ್ಯಗತ್ಯವಾದ ಸಾಧನ. ಆದರೆ ಭಾಷೆಗಿಂತ ಬದುಕು ಮುಖ್ಯ. ಬದುಕಲು ಭಾಷೆ, ಸಾಹಿತ್ಯದ ಅಗತ್ಯವಿದೆ. ಎನ್ನುತ್ತಿದ್ದ ಅದರದು ಉದಾರ ಮನೋಭಾವ. ನಮ್ಮ ಭಾಷೆಯೇ ಶ್ರೇಷ್ಠ, ಅದೊಂದೇ ನಮಗೆ ಸಾಕು ಎಂದು ನಿರ್ಧರಿಸುವುದು ಸರಿಯಲ್ಲ. ಕನ್ನಡಿಗರಿಗೆ ಕನ್ನಡ ಸಾರ್ವಭೌಮ ಭಾಷೆಯಾಗಿರಲಿ. ಆದರೆ ಇತರ ಭಾಷೆಗಳನ್ನು ಕಲಿಯಬೇಕು. ಮನೆಯ ಕಿಟಕಿಗಳನ್ನೆಲ್ಲ ತೆರೆಯಿರಿ. ಎಲ್ಲೆಲ್ಲಿಂದ ಗಾಳಿ, ಬೆಳಕು ಬಂದರೂ ಅದನ್ನು ಬರಮಾಡಿಕೊಳ್ಳಿ. ಸೂರ್ಯನನ್ನು ಕಂಡಲ್ಲಿ ಕೈ ಮುಗಿಯಿರಿ'

ಎಂದು ಸಂಸ್ಕೃತಿ ಜಗತ್ತಿನಲ್ಲಿ ಒಂದು ವಿಶ್ವ ವಿಶಾಲ ಭಾವನೆಯನ್ನು ಬಿತ್ತಿದರು, ಗ್ರೀಕ್ ಮತ್ತು ತಮಿಳು ಭಾಷೆಗಳ ಪ್ರಚಾರ ಮಾಡಿದರು.

ನಮ್ಮ ದೇಶದಲ್ಲಿ ಅನೇಕ ಭಾಷೆಗಳಿವೆ, ವೈವಿಧ್ಯಮಯವಾದ ಸಂಸ್ಕೃತಿಯಿದೆ. ನಮ್ಮ ಭಾಷೆಯಲ್ಲಿ ಮಾತನಾಡುವುದು, ಓದುವುದು, ಬರೆಯುವುದನ್ನು ಮೊದಲು ಕಲಿಯಬೇಕು. ನಮ್ಮ ಭಾಷೆಯನ್ನು ನಾವೇ ಕಲಿಯದಿದ್ದರೆ ಬೇರೆಯವರು ಯಾಕೆ ಕಲಿಯುತ್ತಾರೆ? ಎಂದು ಪ್ರಶ್ನಿಸಿ ಕನ್ನಡ ಭಾಷೆಯ ಪುನರುಜ್ಜೀವನಕ್ಕಾಗಿ ವ್ಯಾಪಕವಾದ ಕಾರ್ಯಕ್ರಮಗಳನ್ನು ರೂಪಿಸಿ ಜನತೆಯ ಮುಂದಿಟ್ಟರು. ಅದು ಈ ರೀತಿಯಿದೆ:-

೧. ನಮ್ಮ ಪೂರ್ವ ಸಾಹಿತ್ಯದ ಭಂಡಾರವನ್ನು ಕಾಪಾಡಿಕೊಳ್ಳಬೇಕು.
೨. ಆ ಸಂದರ್ಭದಲ್ಲಿ ಜಳ್ಳನ್ನು ತೂರಿ ಗಟ್ಟಿ ಕಾಳುಗಳನ್ನು ತುಂಬಿಟ್ಟು ಕೊಳ್ಳಬೇಕು ಎಂದರೆ ಪ್ರಾಚೀನ ಸಾಹಿತ್ಯದ ವಿಮರ್ಶೆ ಮಾಡಿ ಅದರಲ್ಲಿರುವ ಸತ್ವಪೂರ್ಣ ಭಾಗವನ್ನು ಉಳಿಸಿಕೊಂಡು ಸತ್ವಹೀನ ಭಾಗವನ್ನು ತ್ಯಜಿಸಬೇಕು.
೩. ನಾಶವಾಗದೆ ಉಳಿದಿರುವ ಗ್ರಂಥಗಳನ್ನೆಲ್ಲ ಪ್ರಕಟಿಸಬೇಕು.
೪. ಭಾಷಾ ಚರಿತ್ರೆ, ಹಳೆ ಹೊಸಗನ್ನಡ ವ್ಯಾಕರಣ, ನಿಘಂಟು, ಅಲಂಕಾರ, ಕಾವ್ಯ ಸ್ವರೂಪ, ಕಾವ್ಯ ವಿಮರ್ಶೆ, ಛಂದಸ್ಸು, ಕಾವ್ಯಮಾಲೆಯ ಚರಿತ್ರೆ – ಇವುಗಳನ್ನು ರಚಿಸಬೇಕು.
೫. ಪೂರ್ವ ಕಾವ್ಯಗಳ ಉತ್ತಮ ಭಾಗವನ್ನು ಆಯ್ಕೆ ಮಾಡಿ ಉಪಯೋಗಿಸ ಬೇಕು. ರಚಿಸುವವರು ಹೊಸಗನ್ನಡದ ಬಳಕೆಯಲ್ಲಿಲ್ಲದ ಸಂಸ್ಕೃತ ಪದಗಳಿಲ್ಲದ ಭಾಷೆಯನ್ನು ಉಪಯೋಗಿಸಬೇಕು. ಕೃತಿಗಳ ವಿಷಯ ಉಪಯುಕ್ತವಾಗಿದ್ದು ಅದರ ಗುರಿ ಹರ್ಷ ನೀಡುವಂತಿರಬೇಕು. ವಿನೋದಕ್ಕೆ ಕಾಲಹರಣಕ್ಕೆ ಕಥೆ, ಕಾದಂಬರಿ, ಸರಸ ಪ್ರಕಾರಗಳನ್ನು ಸತ್ಯದ ದೃಷ್ಟಿಯಿಂದ ಪರಿಶೋಧಿಸಿ ಸರಿಪಡಿಸಬೇಕು. ಅದರಿಂದ ಜನರಲ್ಲಿ ಸ್ವದೇಶಪ್ರೇಮ, ಆತ್ಮಗೌರವ ವೃದ್ಧಿಸುವುದು.

ಬಿ.ಎಂ.ಶ್ರೀ. ಅನ್ಯಭಾಷಾ ದ್ವೇಷಿಗಳಾಗಿರದೆ ಹಲವಾರು ದೇಶ, ವಿದೇಶದ ಭಾಷೆಗಳನ್ನು ಕಲಿತು ಆ ಭಾಷೆಗಳ ಪ್ರಸಿದ್ಧ ಗ್ರಂಥಗಳನ್ನು ಅಧ್ಯಯನ ಮಾಡಿದ್ದರು. ಅವರ ಅನ್ಯಭಾಷೆಗಳ ಪ್ರೀತಿಯನ್ನು ಕಂಡು ಅವರ ಕನ್ನಡಾಭಿಮಾನವನ್ನು ಕೆಲವರು ಶಂಕಿಸಿದ್ದುಂಟು. ಆದರೆ ಕನ್ನಡಿಗರು ಮೊದಲು ಕನ್ನಡ ಭಾಷೆಯಲ್ಲಿ ಮಾತನಾಡುವುದು, ಓದುವುದು, ಬರೆಯುವುದನ್ನು ಕಲಿತು ನಂತರ ಇತರ ಭಾಷೆಗಳನ್ನು ಕಲಿಯಬೇಕೆಂದು ಅವರು ಹೇಳುತ್ತಿದ್ದರು.

ಇಂಗ್ಲಿಷ್ ಭಾಷೆ, ಸಾಹಿತ್ಯದಲ್ಲಿ ಅವರಿಗೆ ಅಪಾರ ಒಲವು. ಭಾರತದಲ್ಲಿರುವ ಪ್ರತಿಯೊಬ್ಬ ವಿದ್ಯಾವಂತನೂ ಇಂಗ್ಲಿಷ್, ಸಂಸ್ಕೃತ ಮತ್ತು ತನ್ನ ಕಡೆಯ ದೇಶಭಾಷೆ–ಈ ಮೂರನ್ನೂ ಚೆನ್ನಾಗಿ ಕಲಿತಿರಬೇಕು. ತನಗೆ ಹರ್ಷ, ಲಾಭ, ದೇಶಕ್ಕೆ ಸೌಖ್ಯ ಪ್ರಗತಿಯಾಗಬೇಕೆಂದು ಆಶಿಸುವವರಿಗೆ ಈ ಮೂರು ಭಾಷೆಗಳ ಕಲಿಕೆ ಅತ್ಯಾವಶ್ಯಕ. ಎಂದು ಅವರು ಹೇಳಿರುವ ತ್ರಿಭಾಷಾ ಸೂತ್ರ ಇಂದಿಗೂ ವಿಚಾರಾರ್ಹವಾಗಿದೆ.

ಸಂಸ್ಕೃತ ನಮ್ಮ ಪೂರ್ವಿಕರಾದ ಆರ್ಯರ ಭಾಷೆ. ಆ ಭಾಷೆಯಿಂದ ನಾನಾ ರೀತಿಯಲ್ಲಿ ನಮಗೆ ಉಪಕಾರವಾಗಿದೆ. ಮುಂದೆಯೂ ಆಗಬೇಕಾಗಿದೆ ಆ ಭಾಷೆಯಲ್ಲಿ ಸಾಹಿತ್ಯದ ಬಂಢಾರವಿದೆ. ಆ ಭಾಷೆಯಲ್ಲಿರುವ ಕಾವ್ಯ, ನಾಟಕಗಳ ಭಾಷಾಂತರವಾಗಬೇಕು. ಶೃತಿ, ಸ್ಮೃತಿ, ಪುರಾಣ, ಉಪನಿಷತ್ತು, ಅನ್ಯಮತಗಳ ತತ್ವಗಳನ್ನು ಭಾಷಾಂತರ ಮಾಡುವುದರಿಂದ ಭಾಷೆ ಸಮೃದ್ಧವಾಗುತ್ತದೆ. ಸಹೋದರಿಯರಾದ ತಮಿಳು, ತೆಲುಗು ಭಾಷೆಗಳಿಂದ ನಮ್ಮ ಕನ್ನಡ ಭಾಷೆ ಸೀಮಂತವಾಗುತ್ತದೆ. ಇತರ ಭಾಷೆಗಳ ತಿಳುವಳಿಕೆ, ಸಹಕಾರದಿಂದ ನಮ್ಮ ಭಾಷೆಗಳ ಬೆಳವಣಿಗೆ ಸಾಧ್ಯ. ಆದ್ದರಿಂದ ನೆರೆ ರಾಜ್ಯಗಳ ದ್ರಾವಿಡ ಭಾಷೆಗಳನ್ನು ಕನ್ನಡ ಶಬ್ದ ಭಂಡಾರಕ್ಕೆ ತುಂಬಿಕೊಳ್ಳುವುದು ಅಗತ್ಯ.

ನಾಡಿನ ಆಡಳಿತ ಭಾಷೆಗೆ, ಎಲ್ಲಾ ಹಂತಗಳಲ್ಲಿ ವಿಷಯ, ವ್ಯವಹಾರ, ಚಿಂತನ, ಮನಸ್ಸಿನ ಸಂಸ್ಕಾರ, ಸಂಸ್ಕೃತಿಯ ಬೆಳವಣಿಗೆಯ ಸಕಲ ಜವಾಬ್ದಾರಿ ಗಳನ್ನೂ ಹೊತ್ತು ನಿರ್ವಹಿಸುವ ಶಕ್ತಿ, ಸಾಮರ್ಥ್ಯ, ಯೋಗ್ಯತೆಯಿರಬೇಕು. ಆ ಭಾಷೆ ಮಿತಿಯನ್ನು ಮೀರಿ ಬೆಳೆಯಬೇಕು.

ಕನ್ನಡ, ಸಂಸ್ಕೃತ, ಇಂಗ್ಲಿಷ್ ಹಿಂದಿ–ಈ ಭಾಷೆಗಳಲ್ಲಿ ಯಾವ ಭಾಷೆಯನ್ನು ಎಷ್ಟರಮಟ್ಟಿಗೆ ಉಪಯೋಗಿಸಬೇಕು, ಉಳಿಸಿಕೊಂಡು ಬೆಳೆಸಬೇಕು ಎಂಬ ವಿಚಾರವಾಗಿಯೂ ಅವರು ಸಲಹೆ ನೀಡಿದ್ದಾರೆ.

ಭಾರತ ದೇಶಕ್ಕೆ ಸಂಬಂಧಪಟ್ಟ ವಿಷಯ, ವ್ಯವಹಾರಗಳಿಗೆ, ಇತರ ಪ್ರಾಂತ್ಯಗಳಿಂದ ಬಂದ ಜನರು ಒಂದು ಕಡೆ ಸೇರುವ ಸಭೆಗಳಲ್ಲಿ ಇಂಗ್ಲಿಷ್ ಭಾಷೆಯನ್ನು ಬಳಸಬೇಕು. ಆಯಾ ಪ್ರಾಂತ್ಯಗಳಲ್ಲಿ ಅಲ್ಲಿರುವ ಜನರಾಡುವ ಭಾಷೆಯನ್ನು ಬಳಸಬೇಕು ಅಂದರೆ ಕನ್ನಡ ನಾಡಿನಲ್ಲಿ ಜನರು ಕನ್ನಡ ಭಾಷೆಯನ್ನು ಬಳಸಬೇಕು. ದೇಶಭಾಷೆಗಳು ಎಷ್ಟಿದ್ದರೂ ಭಾದಕವಲ್ಲ. ಯಾಕೆಂದರೆ ಜಗತ್ತಿನಲ್ಲಿ ಎಲ್ಲೂ ಒಂದೇ ಭಾಷೆಯಿರುವ ಏಕ ರಾಜ್ಯವಿಲ್ಲ.

ಸಭೆ ಸಮಾರಂಭಗಳಲ್ಲಿ ಬಿ.ಎಂ.ಶ್ರೀ. ಇಂಗ್ಲಿಷ್ ಭಾಷೆಯ ಮಹತ್ವ ಕುರಿತು ಪದೇ ಪದೇ ಪ್ರಸ್ತಾಪಿಸುತ್ತಿದ್ದರು. ಭಾರತೀಯ ಭಾಷೆಗಳಿಗೆ, ಸಾಹಿತ್ಯ ರಚನೆಗೆ ಇಂಗ್ಲಿಷ್ ಭಾಷೆ, ಸಾಹಿತ್ಯವೇ ಪ್ರೇರಕಶಕ್ತಿ. ಕಥೆ, ಕಾದಂಬರಿ, ಪ್ರಬಂಧ, ಪ್ರವಾಸ ಸಾಹಿತ್ಯ ಇಂಗ್ಲಿಷ್ ಭಾಷೆಯಿಂದಲೆ ಆಗಮಿಸಿದ್ದು ಆದ್ದರಿಂದ ಪ್ರತಿಯೊಬ್ಬ ಭಾರತೀಯನೂ ಇಂಗ್ಲಿಷ್ ಕಲಿಯಬೇಕು.

"ಕನ್ನಡದ ಪರವಾಗಿ, ಕನ್ನಡದ ಮೇಲಿನ ಅಭಿಮಾನದಿಂದ ಒಂದು ಮಾತನ್ನು ನಾನು ಹೇಳಿದ ಪಕ್ಷದಲ್ಲಿ ಅದನ್ನು ಸಂಕುಚಿತ ದೃಷ್ಟಿ ಎಂದು ಯಾರೂ ತಿಳಿಯಬಾರದು. ಯಾಕೆಂದರೆ ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ! ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ, ಕನ್ನಡ."

ಅಂದು ಅವರು ಕನ್ನಡದ ಜನತೆಯನ್ನು ಎಚ್ಚರಿಸಿದ ಮಾತುಗಳನ್ನು ಈಗಲೂ ನೆನಪಿಗೆ ತಂದುಕೊಂಡು ಹೆಜ್ಜೆ ಹಾಕುವುದು ಅಗತ್ಯವಾಗಿದೆ.

- ಇಂಗ್ಲಿಷ್ ಮತ್ತು ಸಂಸ್ಕೃತ ಜೀರ್ಣಿಸಿಕೊಳ್ಳಿ, ಕನ್ನಡ ಉಳಿಸಿ ಬೆಳೆಸಿ.
- ಸಾಹಿತ್ಯ ಜನಸಾಮಾನ್ಯರನ್ನು ಮುಟ್ಟಬೇಕು. ಅದು ಕೇವಲ ಪಂಡಿತರ ಅಡಿಯಾಳಾಗಬಾರದು.
- ಸಾಹಿತ್ಯವನ್ನು ಐತಿಹಾಸಿಕ ಮತ್ತು ತುಲನಾತ್ಮಕ ದೃಷ್ಟಿಯಿಂದ ಓದಿದರೇ ನಿಜವಾದ ಬೆಲೆಕಟ್ಟುವ ವಿಮರ್ಶಕ ಬುದ್ದಿ ಬರುತ್ತದೆ.'
- ವಿಮರ್ಶೆಗಳನ್ನು ಓದಿ, ಆದರೆ ವಿಮರ್ಶಕರನ್ನು ಸಂಪೂರ್ಣವಾಗಿ ನಂಬಬೇಡಿ. ನಮಗೆ ಸ್ವಂತ ಬುದ್ಧಿ, ಸ್ವಂತ ದೃಷ್ಟಿಯಿರಬೇಕು.
- ಭಾಷೆಯ ಪುನರುಜ್ಜೀವನವಾಗಬೇಕು, ಅಂದರೆ ಜೀರ್ಣೋದ್ಧಾರವಲ್ಲ.
- ಕನ್ನಡದಲ್ಲಿರುವ ಶಾಸ್ತ್ರಗಳನ್ನು ಕುರಿತ ಬರವಣಿಗೆ ಸಾಲದು, ತುಂಬ ಬರಬೇಕು.
- ಮೊದಲು ಕನ್ನಡ, ನಂತರ ಇತರ ಭಾಷೆಗಳ ವ್ಯಾಸಂಗ
- ಸಾಂಸ್ಕೃತಿಕ ಏಕೀಕರಣ, ಜನತೆಗೆ ಮಾನಸಿಕ ಏಕೀಕರಣ ಕರ್ನಾಟಕದ ಏಕೀಕರಣಕ್ಕೆ ನಾಂದಿಯಾಗುವುದು.
- ಇಂಗ್ಲಿಷ್ ನಮಗೆ ತೊತ್ತಾಗಿ ಬರಲಿ, ನಮ್ಮ ಕನ್ನಡಕ್ಕೆ ಸೇವೆ ಮಾಡಲು ಬರಲಿ.

❖

ಭಾಗ-೩

# ಬಿ.ಎಂ.ಶ್ರೀ : ಸಾಹಿತ್ಯ

'ಶ್ರೀ' ಕಾವ್ಯನಾಮದ 'ಬಿ.ಎಂ.ಶ್ರೀ' ಎಂಬ ಮೂರಕ್ಷರಗಳಿಂದ ಪ್ರಖ್ಯಾತರಾದ ಪ್ರೊಫೆಸರ್ ಬಿ.ಎಂ.ಶ್ರೀಕಂಠಯ್ಯನವರು ಪ್ರಾತಃಸ್ಮರಣೀಯರಾದ ಕನ್ನಡಿಗರಲ್ಲಿ ಅಗ್ರಗಣ್ಯರು, ನಮ್ಮ ಸಾಹಿತ್ಯಕ್ಕೆ ನವೋದಯವನ್ನು ತಂದ ಆಚಾರ್ಯರು, ಪ್ರಾಧ್ಯಾಪಕರಾಗಿ ನೂರಾರು ಹೊಸ ಲೇಖಕರಿಗೆ ಸ್ಫೂರ್ತಿ, ಪ್ರೇರಣೆಯನ್ನು ತಂದುಕೊಟ್ಟ ಮಾರ್ಗದರ್ಶಕರು ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯಕ್ಕೆ ಅವರು ಅಡಿಗಲ್ಲು, ಸ್ತಂಭ, ದೀಪವಾಗಿದ್ದರು.

ಬಿ.ಎಂ.ಶ್ರೀ ಸಾಹಿತ್ಯ ರಚನೆಯ ಪೂರ್ವಭಾವಿಯಾಗಿ ಇಂಗ್ಲಿಷ್, ಕನ್ನಡ ಮತ್ತು ಸಂಸ್ಕೃತ ಭಾಷೆಗಳ ವಿದ್ವಾಂಸರಾಗಿದ್ದರು. ದೇಶ ವಿದೇಶದ ಹಲವಾರು ಭಾಷೆಗಳನ್ನು ಕಲಿತಿದ್ದರು. ಶಿಲಾಶಾಸನ, ತಾಮ್ರ ಶಾಸನಗಳ ತಿಳುವಳಿಕೆ ಪಡೆದಿದ್ದರು. ಹಳೆಗನ್ನಡದ ಕಾವ್ಯಗಳನ್ನು ಓದಿಕೊಂಡಿದ್ದರು. ವರ್ಡ್‌ವರ್ತ್, ಶೆಲ್ಲಿ, ಭೈರನ್, ಕೀಟ್ಸ್, ಸ್ಕಾಟ್, ಟೆನಿಸನ್, ಕ್ಯಾಂಬ್‌ಬೆಲ್ ಮೊದಲಾದ ಪ್ರಸಿದ್ಧ ಆಂಗ್ಲ ಕವಿಗಳ ಕವನಗಳನ್ನು ಅಧ್ಯಯನ ಮಾಡಿದ್ದರು. ಅಧ್ಯಯನ ಮಾಡಿದ್ದ ಕೃತಿಗಳ ಗುಣದೋಷಗಳನ್ನು ಅರಿತು ಕನ್ನಡ ಭಾಷೆ, ಸಾಹಿತ್ಯದ ಮುನ್ನಡೆಗೆ ಬೇಕಾದ ರೂಪರೇಖೆಗಳನ್ನು ತಮ್ಮಲ್ಲಿಯೆ ರೂಪಿಸಿಕೊಂಡಿದ್ದರು. ಕವಿತೆಗಳು, ನಾಟಕಗಳು, ಕಥೆಗಳಲ್ಲದೆ ವಿಜ್ಞಾನಶಾಸ್ತ್ರದ ಗ್ರಂಥಗಳ ರಚನೆ ಹೇಗಿರಬೇಕೆಂಬ ವಿಚಾರದಲ್ಲಿ ತೀರ್ಮಾನ ತೆಗೆದುಕೊಂಡಿದ್ದರು. ವೃತ್ತಿಯಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಕನ್ನಡದ ಗೌರವ ಪ್ರಾಧ್ಯಾಪಕರಾಗಿದ್ದು ಕೆಲವು ಅಸಮಾನ್ಯ ಅಪೂರ್ವ ಕನ್ನಡದ ಕೃತಿಗಳನ್ನು ರಚಿಸಿದರು.

ಬಿ.ಎಂ.ಶ್ರೀ ಬರೆದ ಕೃತಿಗಳ ಸಂಖ್ಯೆ ಹೆಚ್ಚಿಲ್ಲ. ಕೇವಲ ಹತ್ತು ಆದರೆ ಪ್ರತಿಯೊಂದು ಕೃತಿಯೂ ತನ್ನದೇ ಆದ ವೈಶಿಷ್ಟ್ಯ ಮಹತ್ವ ಪಡೆದು ಚಿರಂತನ ಮೌಲ್ಯವುಳ್ಳದ್ದಾಗಿದೆ. ಪ್ರತಿಯೊಂದು ಕೃತಿಯೂ ಬೆಲೆಬಾಳುವ ಮುತ್ತುಗಳು.

ಪ್ರತಿಯೊಂದೂ ಪ್ರಯೋಗವೇ. ಅವರ ಪ್ರಯೋಗಗಳನ್ನು ಇತರರು ಯಶಸ್ವಿಯಾಗಿ ಮುಂದುವರಿಸಿದರು.

ಒಬ್ಬ ವ್ಯಕ್ತಿ ರಚಿಸಿದ ಸಾಹಿತ್ಯ ಗಾತ್ರದಲ್ಲಿ ದೊಡ್ಡದಿರಲಿ, ಚಿಕ್ಕದಾಗಿರಲಿ ಅದು ಮುಖ್ಯವಲ್ಲ. ಆದರೆ ಅದು ಸಾಹಿತ್ಯ, ಬಾಷೆಯ ಮೇಲೆ ಎಷ್ಟರಮಟ್ಟಿಗೆ ಪ್ರಭಾವ, ಪರಿಣಾಮ ಬೀರುತ್ತದೆ ಎನ್ನುವುದು ಮುಖ್ಯವಾಗುತ್ತದೆ. ೨೦ ನೇ ಶತಮಾನದ ಕನ್ನಡ ಸಾಹಿತ್ಯದ ಮೇಲೆ ಅವರ ಕೃತಿಗಳು ಪ್ರಭಾವ ಬೀರಿದರೂ ತಮ್ಮ ಪಾಂಡಿತ್ಯ, ಪ್ರತಿಭೆ, ಅನುಭವಕ್ಕೆ ತಕ್ಕಂತೆ ಹೆಚ್ಚು ಕೃತಿಗಳನ್ನು ರಚಿಸಲಿಲ್ಲ ಎನ್ನುವ ಕೊರಗು ಕನ್ನಡಿಗರನ್ನು ಬಾಧಿಸದೆ ಬಿಡದು. ಅದು ಅಸಹಜ, ಸತ್ಯ ಕೂಡ. ಆದರೆ ಅಂದಿನ ಪರಿಸ್ಥಿತಿಯಲ್ಲಿ ಸಾಹಿತ್ಯ ರಚನೆಗಿಂತ ದುಸ್ಥಿತಿಯಲ್ಲಿದ್ದ ಕನ್ನಡ ನಾಡು, ನುಡಿಯನ್ನು ಪ್ರಚಾರ, ಉಪನ್ಯಾಸಗಳು, ಸಂಘ ಸಂಸ್ಥೆಗಳ ಮೂಲಕ ಹಿಡಿದೆತ್ತುವುದು ಅಗತ್ಯವಾಗಿತ್ತು. ಅದಕ್ಕಾಗಿ ಅವರು ಹೆಚ್ಚು ಸಮಯ ಮೀಸಲಿಟ್ಟರು. ಹೀಗಾಗಿ ಅವರು ಮಾತನಾಡಿದ್ದು ಹೆಚ್ಚು, ಬರೆದದ್ದು ಕಡಿಮೆ.

## ಬಿ.ಎಂ.ಶ್ರೀ. ಯವರಿಂದ ರಚಿಸಲ್ಪಟ್ಟ ಕೃತಿಗಳು

### ೧. A Hand book of Rhetoric hand book:- (೧೯೧೪)

ಬಿ.ಎಂ.ಶ್ರೀ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕ ರಾಗಿದ್ದಾಗ ವಿದ್ಯಾರ್ಥಿಗಳಿಗೆ ಮದ್ರಾಸಿನ ವಿಶ್ವವಿದ್ಯಾನಿಲಯದ ಪದ್ಧತಿಗೆ ಅನುಸಾರವಾಗಿ ಪಠ್ಯಪುಸ್ತಕಗಳನ್ನು ಬೋಧಿಸಬೇಕಾಗುತ್ತಿತ್ತು. ಒಂದು ಪಠ್ಯ ಪುಸ್ತಕದಲ್ಲಿ Rhetoric ಎಂಬ ಪಾಠವಿದ್ದು ಬೋಧಿಸಲು ಅನುಕೂಲ ವಾಗುವುದೆಂದು 'Notes of Rhetoric' ಎಂಬ ಪುಸ್ತಕವನ್ನು ೧೯೧೪ ರಲ್ಲಿ ಬರೆದು ೧೯೧೯ರಲ್ಲಿ "A Hand book of Rhetoric" ಎಂಬ ಹೆಸರಿನಲ್ಲಿ ಪ್ರಕಟಿಸಿದರು.

'Rhetoric is an art of the orator or the art of elequent spoken or written. This consists of clear and effective use of language to convey ideas. Rhetoric is considered as an art of literary expressions and forms.

This subject has two parts.

**Part I - Composition**

This part has three Sections They are structure, style, Rhythm in prose and poem.

Kinds of compositions.

**Part II - Literary Form.**

This part has three sections. They are Literature and its kinds, The form of Poetry and Forms of Prose.

ವಿ.ಸೀತಾರಾಮಯ್ಯನವರು 'ಶ್ರೀ ಸಾಹಿತ್ಯ' ಗ್ರಂಥದ 'ಶ್ರೀ' ಯವರ 'ಪರಿಚಯ-ಕಾಣಿಕೆ' ಎಂಬ ಲೇಖನದಲ್ಲಿ 'A Hand book of Rhetoric' ಗ್ರಂಥದ ಮಹತ್ವ ಕುರಿತು ಕೆಳಕಂಡಂತೆ ಉಲ್ಲೇಖಿಸಿದ್ದಾರೆ.

"ಶ್ರೀ ಯವರು ೧೯೧೭ ರಲ್ಲಿ ನಾನು ಕಾಲೇಜಿನ ವಿದ್ಯಾರ್ಥಿಯಾಗುವುದಕ್ಕೆ ಮೊದಲೆ ಈ ಪುಸ್ತಕವನ್ನು ಬರೆದು ಪ್ರಕಟಿಸಿದ್ದರು. ಈ ಕೃತಿ ವಿವಿಧ ಅಂಶಗಳಾದ ಅಲಂಕಾರ, ಪ್ರಯೋಗ, ಗದ್ಯಪದ್ಯ ರಚನಾ ಸೌಭಾಗ್ಯದ ಗುಣಾವಗುಣ ಲಕ್ಷಣ ಇತ್ಯಾದಿಗಳನ್ನು ತಿಳಿದುಕೊಳ್ಳುವುದಕ್ಕೆ ನೆರವಾಗುತ್ತದೆ. ಗಮನಕ್ಕೆ ಬರಲೇಬೇಕಾದ ಅಂಶಗಳು ಯಾವುವು ಎಂಬುದನ್ನು ಅರಿಯಬೇಕಾದರೆ ಅದನ್ನು ಈಗಲೂ ಓದಬೇಕು. Rhetoric ನೆಲಸೇನು ಎಂಬುದು ಮನಸ್ಸಿಗೆ ವಿಶದವಾಗಿ ಖಚಿತವಾಗಿ ತಿಳಿಯದಿದ್ದ ಕಾಲದಲ್ಲಿ ಅವರ 'A Handbook of Rhetoric' ಪುಸ್ತಕ ಸಿಕ್ಕಿ ತುಂಬ ಉಪಕಾರವಾಯಿತು. ಆದುದರಿಂದ ಒಂದು ರೀತಿಯಲ್ಲಿ ನಾನು ಅವರ ಶಿಷ್ಯವರ್ಗಕ್ಕೆ ಸೇರಿದವನು".

## ೨. 'ಇಂಗ್ಲಿಷ್ ಗೀತಗಳು' (೧೯೨೬)

ಇಂಗ್ಲಿಷ್ ಭಾಷೆ, ಸಾಹಿತ್ಯದಲ್ಲಿ ಅತಿಶಯವಾದ ಪ್ರೀತಿಯಿದ್ದ ಬಿ.ಎಂ.ಶ್ರೀ. ಇಂಗ್ಲಿಷ್ ಅಧ್ಯಾಪಕರಾದರು. ತಾವು ಅಧ್ಯಯನ ಮಾಡಿದ್ದ ಕೆಲವು ಇಂಗ್ಲಿಷ್ ಕವನಗಳನ್ನು ಆಯ್ಕೆ ಮಾಡಿ ಕನ್ನಡ ಭಾಷೆಗೆ ಅನುವಾದ ಮಾಡಿದರು. ಅವರ ಗುರುಗಳಾಗಿದ್ದ ಬಾಪೂ ಸುಬ್ಬರಾಯರು ಮೂರು ಕವನಗಳನ್ನು ೧೯೧೯ ರಲ್ಲಿ, ೧೨ ಕವನಗಳನ್ನು ೧೯೨೧ ರಲ್ಲಿ ತಮ್ಮ 'ವಿದ್ಯಾದಾಯಿನಿ' ಎಂಬ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು. ಡಿ.ವಿ.ಗುಂಡಪ್ಪನವರು ೧೯೨೪ ರಲ್ಲಿ ಇಪ್ಪತ್ನಾಲ್ಕು ಕವನಗಳನ್ನು 'ಕರ್ನಾಟಕ ಜನಜೀವನ' ಎಂಬ ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದರು. ೧೯೨೬ ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ 'ಕರ್ನಾಟಕ ಸಂಘ' ಎಲ್ಲಾ ಕವನಗಳನ್ನೂ ಪುಸ್ತಕ ರೂಪದಲ್ಲಿ ಪ್ರಕಟಿಸಿತು. ಮೈಸೂರಿನ 'ಕನ್ನಡ ಕವಿಕಾವ್ಯಮಾಲೆ' ೧೯೪೯, ೧೯೫೩, ೧೯೫೬, ೧೯೬೭ಮ ೧೯೭೩ ರಲ್ಲಿ ಮರು ಮುದ್ರಣ ಮಾಡಿತು. ಅದರ ಪ್ರಕಾಶಕರು ಎಚ್.ಎಂ.ಶಂಕರ ನಾರಾಯಣರಾವ್. ಕರ್ನಾಟಕ ಸರ್ಕಾರದ 'ಕನ್ನಡ ಮತ್ತು ಸಂಸ್ಕೃತಿ' ಇಲಾಖೆ ೧೯೮೩ ರಲ್ಲಿ ಈ ಕೃತಿಯ ಮರು ಮುದ್ರಣ ಮಾಡಿತು.

ಇಂಗ್ಲಿಷ್ ಕಾವ್ಯಗಳನ್ನು ಕನ್ನಡಕ್ಕೆ ಅನುವಾದಿಸುವ ಕಾರ್ಯಕ್ಕೆ ಸುಮಾರು ಒಂದು ಶತಮಾನದ ಇತಿಹಾಸವಿದೆ. ಪಂಜೆ ಮಂಗೇಶರಾಯರು, ದಟ್ಟಿ ಅಂಗಡಿ ನಾರಾಯಣರಾಯರು, ಗೋವಿಂದ ಪೈ ಕೆಲವು ಅನುವಾದಗಳನ್ನು ಮಾಡಿದ್ದರು. ಹೆಚ್.ಜಿ.ನರಸಿಂಹಾಚಾರ್ಯರು ಇಂಗ್ಲಿಷ್ ಮತ್ತು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದ ಮಾಡಿದ್ದರು. ಆದರೆ ಅವರೆಲ್ಲರಿಗಿಂತ 'ಬಿ.ಎಂ.ಶ್ರೀ.' ಯವರ ಅನುವಾದ ಹೆಚ್ಚು ಯಶಸ್ಸು ಮತ್ತು ಸಾರ್ಥಕತೆಯನ್ನು ಪಡೆಯಿತು ಎಂದು ಹೇಳಿದರೆ ತಪ್ಪಾಗಲಾರದು.

'ಇಂಗ್ಲಿಷ್ ಗೀತಗಳು' ಕವನ ಸಂಕಲನ ಪ್ರಕಟವಾದಾಗ ಬಿ.ಎಂ.ಶ್ರೀಕಂಠಯ್ಯನವರು ತಮ್ಮ ಸಂಪೂರ್ಣ ಹೆಸರನ್ನು ಪ್ರಕಟಿಸದೆ 'ಶ್ರೀ' ಎಂಬ ಕಾವ್ಯನಾಮವನ್ನು ಬಳಸಿ ಅಂದಿನಿಂದ ಕನ್ನಡ ಸಾಹಿತ್ಯ ಲೋಕಕ್ಕೆ 'ಶ್ರೀ' ಎಂದೇ ಪರಿಚಿತರಾಗಿ ಪ್ರಸಿದ್ಧರಾದರು.

'ಇಂಗ್ಲಿಷ್ ಗೀತಗಳು' ಕನ್ನಡ ನವೋದಯ ಕಾಲದ ನಾಂದಿ ಗ್ರಂಥ. ಬಿ.ವೆಂಕಟಚಾರ್ಯರು ಬಂಗಾಳಿ ಕಾದಂಬರಿಗಳ ಮೂಲಕ ಕನ್ನಡದ ಚೈತನ್ಯವನ್ನು ಬೆಳಗಿಸಿದಂತೆ ಬಿ.ಎಂ.ಶ್ರೀ. 'ಇಂಗ್ಲಿಷ್ ಗೀತಗಳು' ಮೂಲಕ ನವೋದಯ ಕಾವ್ಯದ ನಾಂದಿ ಹಾಡಿದರು. ಅದರಿಂದ ಪಾಚಿ ಕಟ್ಟಿದ್ದ ಕಾವ್ಯ ಪ್ರಪಂಚಕ್ಕೆ ಹೊಸಬೆಳಕು ಪರಿಚಯವಾದಂತಾಯಿತು.

"ಇಂಗ್ಲಿಷ್ ಗೀತಗಳು' ಕನ್ನಡ ಸಾಹಿತ್ಯ ಲೋಕಕ್ಕೆ ಸಾಗರದಾಚೆಯಿಂದ ಹೊಸತನವನ್ನು ತಂದುಕೊಟ್ಟ ಗ್ರಂಥ, ಭಾವಗೀತೆಗಳ ಭಾಷಾಂತರಕ್ಕೆ ಕೈಪಿಡಿಯಾಗಿ ಕಾವ್ಯ ಶೈಲಿಗೆ ಮಾದರಿಯಾಗಿ ಕಣ್ಣಾರೆ ಕಂಡಿದ್ದು, ಕಿವಿಯಾರೆ ಕೇಳಿದ್ದು, ಸಂತೋಷ ಇಲ್ಲವೆ ಸಂಕಟಪಟ್ಟಿದ್ದು ಕಾವ್ಯಕ್ಕೆ ವಸ್ತುವಾಗಬಲ್ಲದು ಎನ್ನುವುದನ್ನು ಈ ಕೃತಿಯ ಮೂಲಕ ಅವರು ಸಾಹಿತ್ಯ ಪ್ರಪಂಚಕ್ಕೆ ತೋರಿಸಿಕೊಟ್ಟರು."

ಅನುವಾದ ಕಾರ್ಯಕ್ಕೆ ತನ್ನದೇ ಆದ ಇತಿಮಿತಿಗಳಿರುತ್ತದೆ. ಅನುವಾದಿತ ಕೃತಿ ಬೀರುವ ಪ್ರಭಾವ, ನೀಡುವ ಮಾರ್ಗದರ್ಶನ ಬಹಳ ಮುಖ್ಯ. ಈ ದೃಷ್ಟಿಯಿಂದಲೂ ಈ ಗ್ರಂಥ ವಿಶಿಷ್ಟ ಸ್ಥಾನವನ್ನು ಪಡೆದಿದೆ ಎನ್ನಬಹುದು.

'ಇಂಗ್ಲಿಷ್ ಗೀತಗಳು' ಬಿ.ಎಂ.ಶ್ರೀಯವರ ಸ್ವಯಂ ಸ್ಫೂರ್ತಿ ಕೃತಿಯಲ್ಲ, ಭಾಷಾಂತರ ಕೃತಿ. ಈ ಸಂಕಲನದಲ್ಲಿ ಒಟ್ಟು ಅರವತ್ತೂರು ಗೀತಗಳಿವೆ. ಪ್ರಸಿದ್ಧ ಆಂಗ್ಲ ಕವಿಗಳಾದ ಶೆಲ್ಲಿ, ವರ್ಡ್ಸ್‌ವರ್ತ್, ಷೇಕ್ಸ್‌ಪಿಯರ್ ಮುಂತಾದವರ ಕವನಗಳನ್ನಲ್ಲದೆ ಕೆಲವು ಅನಾಮಿಕ ಕವನಗಳೂ ಅನುವಾದಗೊಂಡಿವೆ. ಈ ಕವನಗಳಲ್ಲಿ ದೇಶಭಕ್ತಿ, ದೈವಭಕ್ತಿ, ಪ್ರೇಮ, ಪ್ರಕೃತಿ ಸೌಂದರ್ಯ, ಮಾನವನ

ನೋವು, ನಲಿವು, ದ್ವೇಷ, ಜನ್ಮಾಂತರ ದರ್ಶನಗಳು, ಯುದ್ಧ, ಮರಣ ಮುಂತಾದ ವಿಚಾರಗಳಿವೆ. ಬಳಕೆಯಲ್ಲಿರುವ ಕನ್ನಡ ಮತ್ತು ಸಂಸ್ಕೃತ ಶಬ್ದಗಳನ್ನು ಬಳಸಲಾಗಿದೆ. ಶೈಲಿ, ಪ್ರಯೋಗ, ವ್ಯಕ್ತಿತ್ವ ಮತ್ತು ಛಂದಸ್ಸಿನಲ್ಲಿ ಮೂಲ ಕವಿಯನ್ನು ಅನುಸರಿಸಿದ್ದರೂ ಸ್ವತಂತ್ರ ಗೀತಗಳ ಅನುಭವವನ್ನು ತಂದುಕೊಟ್ಟು ಇಂದಿನ ಕವಿಗಳಿಗೆ ಕಾವ್ಯ ಸೌಂದರ್ಯ, ಕವಿಯ ಸಹಜ ಭಾಷೆ ಕುರಿತು ಮಾರ್ಗದರ್ಶನ ನೀಡುತ್ತವೆ.

ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಛಂದಸ್ಸು ಬೇರೆ ಬೇರೆಯಾಗಿರುವುದು. ಒಂದು ಭಾಷೆಯ ಛಂದಸ್ಸನ್ನು ಮತ್ತೊಂದು ಭಾಷೆಗೆ ವರ್ಗಾಯಿಸುವುದು ಆಗದ ಕೆಲಸ. ಆದರೆ ಅವರು ಇಂಗ್ಲಿಷ್ ಕವನಗಳ ನಡಿಗೆಗೆ ಸಮಾನವಾದುದನ್ನು ಕನ್ನಡದಲ್ಲಿ ಗುರುತಿಸಿದರು, ಬರೆದರು, ಯಶಸ್ಸು ಪಡೆದರು, ಅದುವರೆವಿಗೆ ಯಾರೂ ಬೇರೆ ಬೇರೆ ಕವಿಗಳ ಇಂಗ್ಲಿಷ್ ಕವನಗಳನ್ನು ಕನ್ನಡಕ್ಕೆ ಅನುವಾದಿಸಿರಲಿಲ್ಲ. ಆದರೆ ಅವರು ಬೇರೆ ಬೇರೆಯವರ ಕವನಗಳನ್ನು ತಮ್ಮದೇ ಎನ್ನುವಂತೆ ಸ್ವಾಧೀನಪಡಿಸಿಕೊಂಡು ಯಶಸ್ವಿಯಾಗಿ ಅನುವಾದಿಸಿದರು.

ಈ ಕೃತಿ ಅನುವಾದಿತ ಕೃತಿಯಾಗಿ ಕನ್ನಡ ಸಾಹಿತ್ಯ ಇತಿಹಾಸದಲ್ಲೆ ಕ್ರಾಂತಿಯನ್ನುಂಟುಮಾಡಿತಲ್ಲದೆ ಅನೇಕ ಅನುವಾದ ಮತ್ತು ಸ್ವತಂತ್ರ ಕವನಗಳ ರಚನೆಗೆ ಸ್ಫೂರ್ತಿಯಾಯಿತು. ಅನೇಕರು ಸ್ವತಂತ್ರದಿಂದ, ಉತ್ಸಾಹದಿಂದ ಅನುವಾದ ಕ್ಷೇತ್ರದಲ್ಲಿ ಸಂಚರಿಸಲು ಮುಂದಾದರು. ಅಚ್ಚ ಹೊಸಗನ್ನಡದಲ್ಲಿ ಕನ್ನಡಕ್ಕೆ ಅನುವಾದ ಮಾಡುವ ಪ್ರಯತ್ನ ಮಾಡಿದರು.

ಇತ್ತೀಚೆಗೆ ಕೆಲವು ವಿಮರ್ಶಕರು 'ಬಿ.ಎಂ.ಶ್ರೀ.' ಇನ್ನೂ ಉತ್ತಮವಾದ ಕವನಗಳನ್ನು ಅನುವಾದ ಮಾಡಬಹುದಾಗಿತ್ತು ಎಂದು ಆಕ್ಷೇಪಿಸಿದ್ದುಂಟು. ಈ ಬಗೆಯ ಟೀಕೆಗಳನ್ನು ನಿರೀಕ್ಷಿಸಿದ್ದ ಅವರು 'ಇಂಗ್ಲಿಷ್ ಗೀತಗಳು' ಸಂಕಲನದಲ್ಲಿರುವ 'ಅರಿಕೆ' ಯಲ್ಲಿ ಈ ರೀತಿ ಪ್ರಸ್ತಾಪಿಸಿದ್ದಾರೆ.

"ಈ ಕವನಗಳನ್ನು ಇಂಗ್ಲಿಷ್ ಕಾವ್ಯಮಾಲೆಯ ನಾಯಕರತ್ನಗಳೆಂದು ನಾನು ತಿಳಿದುಕೊಂಡಿದ್ದಲ್ಲ. ಇವರೆಲ್ಲ ಉತ್ತಮ ಕವಿಗಳೂ ಅಲ್ಲ. ಆದರೆ ಪದೇ ಪದೇ ಓದುತ್ತಿದ್ದಾಗ ನನ್ನ ಮನಸ್ಸಿಗೆ ಒಪ್ಪಿಗೆಯಾದ ಕವನಗಳಿವು. ಇಂಗ್ಲಿಷ್ ಕವಿಗಳು ಶೃಂಗಾರ ರಸವನ್ನು ಹೇಗೆ ಗಂಭೀರವಾಗಿ, ಸೂಕ್ಷ್ಮವಾಗಿ, ಸ್ವಾಭಾವಿಕವಾಗಿ ತೋರಿಸುತ್ತಾರೆ ಎನ್ನುವುದನ್ನು ಎತ್ತಿ ಹಿಡಿಯಲು ಈ ಬಗೆಯ ಕವನಗಳನ್ನು ಹೆಚ್ಚಾಗಿ ಆಯ್ಕೆ ಮಾಡಿಕೊಂಡೆ. ಇಂಗ್ಲಿಷ್ ಸಾಹಿತ್ಯ ಸಮುದ್ರದ ಅಲೆಗಳು ಎಸೆದ ಈ ಕೆಲವು ಸಣ್ಣಸಣ್ಣ ಚಿಪ್ಪುಗಳು ಅನುಭವಕ್ಕೆ ಬಾರದಿರಲಾರದು ಎಂದು ನಾನು ನಂಬಿದ್ದೇನೆ."

'ಇಂಗ್ಲಿಷ್ ಗೀತಗಳು' 'ಕವನ ಸಂಕಲನ ಕುರಿತು ಕೆಲವು ಸಾಹಿತಿಗಳು ಈ ರೀತಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

"ಈ ಕೃತಿ ಪ್ರಕಟವಾದ ಘಳಿಗೆ ಅಮೃತ ಘಳಿಗೆ ಅದನ್ನು ರಚಿಸಿದ ಹಸ್ತ ಅಮೃತ ಹಸ್ತ"-ಎಂದಿದ್ದಾರೆ ಮಾಸ್ತಿ ವೆಂಕಟೇಶ ಐಯ್ಯಂಗಾರ್

ಈ ಗೀತಗಳಲ್ಲಿ ಬಿ.ಎಂ.ಶ್ರೀ ಛಂದಸ್ಸಿನ ಹೊಸದೊಂದು ಅಧ್ಯಾಯವನ್ನೆ ಬರೆದರು'- ಡಿ.ಎಲ್.ನರಸಿಂಹಾಚಾರ್ಯರು.

"ಈ ಕವನ ಸಂಕಲನದಲ್ಲಿ ಹೊಸತನವಿರುವುದು ನಿಜವಾಗಿ ಅವರ ಹೊಸ ಛಂದಸ್ಸಿನಲ್ಲಿ" ಎಸ್. ಅನಂತನಾರಾಯಣ.

"ಶ್ರೀ ಯವರನ್ನು 'ಕವಿಗಳ ಕವಿ' ಎನ್ನಬಹುದು. ಆಧುನಿಕ ಯುಗದಲ್ಲಿ ಕವಿರಾಜಮಾರ್ಗ ತೋರಿಸಿಕೊಟ್ಟರು" ಎಲ್.ಎಸ್.ಶೇಷಗಿರಿರಾವ್.

## ೩. ನಾಟಕಗಳು

ಸಾವಿರದ ಏಳುನೂರು ವರ್ಷಗಳ ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದರೆ ಸಿಂಗಾಚಾರ್ಯರ 'ಮಿತ್ರವಿಂದ ಗೋವಿಂದ' ಎಂಬ ನಾಟಕವಲ್ಲದೆ ಬೇರೆ ಯಾವ ಕನ್ನಡ ನಾಟಕವೂ ಲಭ್ಯವಾಗುವುದಿಲ್ಲ. ಅವರು ಚಿಕ್ಕ ದೇವರಾಜ ಒಡೆಯರ ಕಾಲದಲ್ಲಿ ಆಸ್ಥಾನ ಕವಿಯಾಗಿದ್ದರು. ಆ ಕಾಲದಲ್ಲಿ ಮಹಾಕಾವ್ಯಗಳನ್ನು ರಚಿಸಿದ ಕನ್ನಡ ಕವಿಗಳೆಲ್ಲ ಸಂಸ್ಕೃತ ಪಂಡಿತರಾಗಿದ್ದು ಸಂಸ್ಕೃತ ನಾಟಕಗಳ ಪರಿಚಯ ಪಡೆದವರಾಗಿದ್ದರು. ಹಾಗಿದ್ದರೂ ಅವರಲ್ಲಿ ಯಾರೂ ಸಂಸ್ಕೃತ ನಾಟಕಗಳ ಅನುವಾದವನ್ನಾಗಲಿ, ಸ್ವತಂತ್ರ ಕನ್ನಡ ನಾಟಕಗಳನ್ನಾಗಲಿ ರಚಿಸಲಿಲ್ಲ.

ಬಿ.ಎಂ.ಶ್ರೀ. ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಲೆ ವಾಣೀವಿಲಾಸ ಮಹಾಭಾರತ, ರಾಮಾಯಣ, ಷೇಕ್ಸ್‌ಪಿಯರ್ ಮತ್ತು ಗ್ರೀಕರ ರುದ್ರ ನಾಟಕಗಳನ್ನು ಅಧ್ಯಯನ ಮಾಡಿ ಕಾವ್ಯಗಳಲ್ಲಿದ್ದ ನಾಟಕೀಯ ಗುಣಗಳನ್ನು ಗಮನಿಸಿದ್ದರು. ಷೇಕ್ಸ್‌ಪಿಯರ್ ಮಹಾಕವಿಯ ರುದ್ರ ನಾಟಕಗಳು, ಗ್ರೀಕ್ ರುದ್ರ ನಾಟಕಗಳು ಅವರಿಗೆ ಪ್ರಿಯವಾಗಿದ್ದವು.

ಬಿ.ಎಂ.ಶ್ರೀ 'ಗದಾಯುದ್ಧ ನಾಟಕಂ' 'ಅಶ್ವತ್ಥಾಮನ್' ಮತ್ತು 'ಪಾರಸಿಕರು' ಎಂಬ ಮೂರು ನಾಟಕಗಳನ್ನು ರಚಿಸಿ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಮಹೋಪಕಾರ ಮಾಡಿದರು.

### ೧. ಗದಾಯುದ್ಧ ನಾಟಕಂ (೧೯೨೬):

ಬಿ.ಎಂ.ಶ್ರೀ ಮೈಸೂರು ವಿಶ್ವವಿದ್ಯಾನಿಲಯದ ಸಂಘದ ಅಧ್ಯಕ್ಷರಾಗಿದ್ದಾಗ

ಕನ್ನಡ ನಾಟಕಗಳನ್ನು ಆಡುವುದಕ್ಕೆ ಮೊದಲಾಯಿತು. 'ಗದಾಯುದ್ಧ ನಾಟಕಂ'ಗೆ ಅಗ್ರಪೂಜೆ ದೊರೆಯಿತು.

ಬಿ.ಎಂ.ಶ್ರೀ. ರನ್ನನ 'ಸಾಹಸ ಭೀಮ ವಿಜಯ' ಎಂಬ ಚಂಪೂ ಕಾವ್ಯವನ್ನು 'ಗದಾಯುದ್ಧ ನಾಟಕ'ವನ್ನಾಗಿ ಸಿದ್ದಗೊಳಿಸಿ ೧೯೨೫ ರಲ್ಲಿ ಪ್ರದರ್ಶನಗೊಂಡಿತು. ೧೯೨೬ ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ನಂತರ ಕಾಲೇಜಿನ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಯಿತು.

**ಗದಾಯುದ್ಧ ನಾಟಕಂ ಕಥಾವಸ್ತು ಕೆಳಕಂಡಂತಿದೆ:–**

'ಆತ್ಮೀಯರನ್ನೆಲ್ಲ ಯುದ್ಧದಲ್ಲಿ ಕಳೆದುಕೊಂಡ ದುರ್ಯೋಧನ ರಣರಂಗದಲ್ಲಿ ಬಿದ್ದಿದ್ದ ಮಗ ಲಕ್ಷಣ ಕುಮಾರ, ತಮ್ಮ ದುಶ್ಯಾಸನ, ಮಿತ್ರ ಕರ್ಣನ ಶವಗಳನ್ನು ನೋಡಿ ದುಃಖಿಸುತ್ತಾನೆ. ಅವನ ಚಿಂತಾಜನಕ ಸ್ಥಿತಿಯನ್ನು ನೋಡಿ ಭೀಷ್ಮನಿಗೆ ಕರುಣೆಯುಂಟಾಗಿ ಪಾಂಡವರೊಡನೆ ಸಂಧಾನ ಮಾಡಿಸುತ್ತೇನೆಂದು ಹೇಳಿದಾಗ ದುರ್ಯೋಧನ ಸಮ್ಮತಿಸುವುದಿಲ್ಲ. ಭೀಮನಿಂದ ತಾತ್ಕಾಲಿಕ ರಕ್ಷಣೆ ಪಡೆಯಲು ವೈಶಂಪಾಯನ ಸರೋವರದಲ್ಲಿ ಮುಳುಗಿರುತ್ತಾನೆ. ಅವನನ್ನು ಪತ್ತೆ ಮಾಡಿದ ಭೀಮ ಮೂರ್ಛೆ ಬೀಳುವಂತೆ ಹೊಡೆಯುತ್ತಾನೆ. ಆ ಸ್ಥಳಕ್ಕೆ ಧಾವಿಸಿದ ಅಶ್ವತ್ಥಾಮ 'ಪಾಂಡವರನ್ನು ಕೊಂದು ಅವರ ತಲೆಗಳನ್ನು ತರುತ್ತೇನೆ' ಎಂದು ಪ್ರತಿಜ್ಞೆ ಮಾಡಿ ಉಪ ಪಾಂಡವರನ್ನು ಕೊಂದು ಅವರ ತಲೆಗಳನ್ನು ತಂದು ದುರ್ಯೋಧನನಿಗೆ ತೋರಿಸಿದಾಗ ಅವನು ಪಶ್ಚಾತ್ತಾಪದಿಂದ ನರಳಿ ಸಾಯುತ್ತಾನೆ.'

ಈ ನಾಟಕ ಗ್ರೀಕ್ ಮಾದರಿಯ ರುದ್ರನಾಟಕ. ಇದು ಪ್ರಕಟವಾದ ಮುಹೂರ್ತ ಶುಭ ಮುಹೂರ್ತ. ಯಾಕೆಂದರೆ ರಂಗಸ್ಥಳದ ಮೇಲೆ ಬರುತ್ತಿದ್ದಂತೆ ರನ್ನ ಕವಿ ಪ್ರಶಸ್ತಿ ಪ್ರಕಟವಾಯಿತಲ್ಲದೆ ಮಿಕ್ಕ, ಕವಿ ಪ್ರಶಸ್ತಿಗಳ ಪ್ರಕಟಣೆಗೆ ನಾಂದಿಯಾಯಿತು. ಕನ್ನಡದಲ್ಲಿಲ್ಲದ ರುದ್ರ ನಾಟಕಗಳ ಅನುವಾದ ಮತ್ತು ಸ್ವತಂತ್ರ ನಾಟಕಗಳ ಸೃಷ್ಟಿಗೆ ಭದ್ರವಾದ ಬುನಾದಿ ಹಾಕಿಕೊಟ್ಟಿತು.

ರನ್ನನ ಕೃತಿ ಕಾವ್ಯ, ಆದರೆ ಬಿ.ಎಂ.ಶ್ರೀ.ಯವರ 'ಗದಾಯುದ್ಧ ನಾಟಕಂ' ಒಂದು ನಾಟಕ. ವಸ್ತು ಮಹಾಭಾರತದ್ದಾದರೂ ರಚನಾ ವಿಧಾನದಲ್ಲಿ ಗ್ರೀಕ್ ನಾಟಕದ ಪ್ರಭಾವವಿದೆ. ಷೇಕ್ಸ್‌ಪಿಯರ್ ನಾಟಕಗಳಲ್ಲಿರುವಂತೆ ಈ ನಾಟಕದಲ್ಲೂ ಐದು ಅಂಕಗಳಿವೆ. ಗದ್ಯಭಾಗಕ್ಕಿಂತ ಪದ್ಯಭಾಗವೇ ಹೆಚ್ಚಾಗಿದ್ದು ಸುಮಾರು ಐನೂರು ಪದ್ಯಗಳಿವೆ.

'ಗದಾಯುದ್ಧ ನಾಟಕಂ'ನಲ್ಲಿ ಅವರು ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ರನ್ನನ ಕಾವ್ಯದಿಂದ ಕೆಲವನ್ನು ಆಯ್ದುಕೊಂಡು ಕೆಲವನ್ನು ಸ್ಥಳಾಂತರಿಸಿದ್ದಾರೆ. ಸಂಭಾಷಣೆಗಳನ್ನು ಒಡೆದು ವಾಕ್ಯಗಳನ್ನು ಸೇರಿಸಿದ್ದಾರೆ. ಈ ಬದಲಾವಣೆಗಳಿಂದ ರನ್ನನ ಕಾವ್ಯದ ನಾಯಕ ಭೀಮನಾಗಿರದೆ ದುರ್ಯೋಧನ ಎನ್ನಬಹುದಾಗಿದೆ. ಅದಕ್ಕೆ ಕಾರಣ ನಾಟಕದಲ್ಲಿ ಬರುವ ದುರ್ಯೋಧನನ ಛಲ, ಮಾತಾಪಿತೃ ಭಕ್ತಿ, ಭ್ರಾತೃವಾತ್ಸಲ್ಯ, ಮಿತ್ರಸ್ನೇಹ, ಶತ್ರುವಿನ ಪರಾಕ್ರಮವನ್ನು ಹೊಗಳತಕ್ಕ ದೊಡ್ಡ ಗುಣ, ಅಂತ್ಯದಲ್ಲಿ ದೈವಶಕ್ತಿಯನ್ನು ನಂಬಿ ನಿಶ್ಚಿಂತೆಯಿಂದ ಪ್ರಾಣ ಬಿಡುವ ರೀತಿ ಇವೆಲ್ಲವೂ ನಮ್ಮನ್ನು ಆಕರ್ಷಿಸುತ್ತವೆ.

ರನ್ನನ ಕಾವ್ಯ ದುರಂತವಲ್ಲವಾದರೂ ಬಿ.ಎಂ.ಶ್ರೀ.ಯವರ ನಾಟಕ ದುರಂತವಾಗಿದ್ದರೂ ಅದರಲ್ಲಿ ರಸವತ್ತಾದ ಸನ್ನಿವೇಶಗಳು, ಹೃದಯ ಕಲಕುವ ದೃಶ್ಯಗಳಿವೆ. ರನ್ನನ ಕಾವ್ಯದಲ್ಲಿ ಕಾಣುವ ರಾಜಕೀಯವನ್ನು ಬಳಸಿಕೊಂಡು ಯಶಸ್ವಿಯಾದ ನಾಟಕವನ್ನಾಗಿ ಪರಿವರ್ತಿಸಿದ್ದಾರೆ. ರನ್ನನ ಕಾವ್ಯದಿಂದ 'ಗದಾಯುದ್ಧ ನಾಟಕಂ' ಎಂಬ ರುದ್ರ ನಾಟಕವನ್ನು ಹೊರಗೆಳೆದ ಕೀರ್ತಿ ಬಿ.ಎಂ.ಶ್ರೀ ಅವರಿಗೆ ಸಲ್ಲುತ್ತದೆ.

**೨. 'ಅಶ್ವತ್ಥಾಮನ್' ನಾಟಕ (೧೯೨೯)**

ಬಿ.ಎಂ.ಶ್ರೀ. ಯವರು ರಚಿಸಿದ ಎರಡನೆಯ ನಾಟಕದ ಹೆಸರು 'ಅಶ್ವತ್ಥಾಮನ್' 'ಗದಾಯುದ್ಧ ನಾಟಕಂ'ದ ದ್ವಿತೀಯ ಭಾಗದಂತಿರುವ ಈ ನಾಟಕ ಮಹಾಕವಿ ಸೊಫೊಕ್ಲಿನ 'ಏಜಾಕ್ಸ್' ನಾಟಕದ ರೂಪಾಂತರ. ಬೆಂಗಳೂರು ಸೆಂಟ್ರಲ್ ಕಾಲೇಜಿನ 'ಕರ್ನಾಟಕ ಸಂಘ ಪುಸ್ತಕ ರೂಪದಲ್ಲಿ ಈ ನಾಟಕವನ್ನು ೧೯೨೯ ರಲ್ಲಿ ಪ್ರಕಟಿಸಿತು. ಅದೇ ವರ್ಷ ಫೆಬ್ರವರಿ ೧೦ ನೇ ತಾರೀಖು ಮೈಸೂರಿನ ಮಹಾರಾಜ ಕಾಲೇಜಿನ ವೇದಿಕೆಯ ಮೇಲೆ ಬಿ.ಎಂ.ಶ್ರೀ ಯವರ ಸಾರಥ್ಯದಲ್ಲಿ ಪ್ರದರ್ಶನಗೊಂಡಾಗ ಗ್ರೀಕ್ ನಾಟಕವೊಂದು ಕನ್ನಡ ರಂಗ ವೇದಿಕೆಯ ಮೇಲೆ ಮೊದಲ ಬಾರಿ ಪ್ರದರ್ಶನಗೊಂಡಂತಾಯಿತು.

**'ಏಜಾಕ್ಸ್' ನಾಟಕದ ಕಥಾವಸ್ತು ಈ ರೀತಿಯಿದೆ:**

'ಗ್ರೀಕ್ ವೀರರಲ್ಲಿ ಅಕಲೀಸ್ ಒಬ್ಬನನ್ನು ಬಿಟ್ಟರೆ ಏಜಾಕ್ಸ್ ಅತ್ಯಂತ ಪರಾಕ್ರಮಶಾಲಿ. ಅಕಲೀಸ್ ಸತ್ತನಂತರ ಅವನ ತನು ಪ್ರಾಣವನ್ನು armour ಯಾರಿಗೆ ಕೊಡಬೇಕೆಂಬ ಪ್ರಶ್ನೆ ಬರುತ್ತದೆ. ಅದನ್ನು ಹಿಡಿಸ್ಯೂಸ್‌ಗೆ ಕೊಟ್ಟಾಗ ಅದಕ್ಕೆ ಕಾರಣರಾದ ನಾಯಕರನ್ನು ಮತ್ತು ಹಿಡಿಸ್ಯೂಸ್‌ನನ್ನು ನಾಶಮಾಡಬೇಕೆಂದು

ಏಜಾಕ್ಸ್ ನಿಶ್ಚಯಿಸುತ್ತಾನೆ. ಆದರೆ ಊರದೇವತೆ ಅವನಿಗೆ ಬುದ್ಧಿಭ್ರಮಣೆ ಯಾಗುವಂತೆ ಮಾಡುತ್ತಾಳೆ. ಬುದ್ಧಿ ಭ್ರಮಣೆಯಲ್ಲಿ ಅವನು ತನ್ನ ಶತ್ರುಗಳೆಂದು ಭ್ರಮಿಸಿ ಕುರಿ ಮತ್ತಿತ್ತರ ಪ್ರಾಣಿಗಳನ್ನು ಕೊಲ್ಲುತ್ತಾನೆ. ಹುಚ್ಚು ಇಳಿದ ಮೇಲೆ ಅವನಿಗೆ ತಾನು ಮಾಡಿದ ತಪ್ಪಿನ ಅರಿವಾಗುತ್ತದೆ. ಎಲ್ಲರ ತಿರಸ್ಕಾರಕ್ಕೆ ಗುರಿಯಾಗಿದ್ದೀನೆಂದು ನೊಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.

ಮಹಾಭಾರತದಲ್ಲಿ ಬರುವ ಸೌಪ್ತಿಕಪರ್ವದ ಕಥೆ ಈ ರೀತಿಯಿದೆ. 'ಗದಾಯುದ್ಧದಲ್ಲಿ ದುರ್ಯೋಧನ ತೊಡೆ ಮುರಿಸಿಕೊಂಡು ಸಾಯುವ ಸ್ಥಿತಿಯಲ್ಲಿದ್ದಾಗ ಆ ದೃಶ್ಯವನ್ನು ನೋಡಿದ ಅಶ್ವತ್ಥಾಮ ಆ ದಿನವೇ ಪಾಂಡವರನ್ನು ಕೊಂದು ತನ್ನ ಪ್ರಭುವಿನ ಸೇಡು ತೀರಿಸಿಕೊಳ್ಳುತ್ತೇನೆಂದು ಪ್ರತಿಜ್ಞೆ ಮಾಢುತ್ತಾನೆ. ಆದರೆ ಉಪ ಪಾಂಡವರನ್ನು ಕೊಲ್ಲುವ ತಪ್ಪು ಮಾಡುತ್ತಾನೆ. ವಿಷಯ ತಿಳಿದ ಕೃಷ್ಣ 'ನೀನು ಮೂರು ಸಾವಿರ ವರ್ಷ ಮನುಷ್ಯರ ಸಹವಾಸವಿಲ್ಲದೆ ನಿರ್ಜನ ಪ್ರದೇಶದಲ್ಲಿ ಅಲೆದಾಡುತ್ತಿರು' ಎಂದು ಶಪಿಸುತ್ತಾನೆ.

ಬಿ.ಎಂ.ಶ್ರೀ. ಮೂಲಕಥಾ ವಸ್ತುವಿನ ಅವಲಂಬನ ಸಾಕಾಗದೆ ನಾಟಕದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ನಾಯಕ ಅಶ್ವತ್ಥಾಮನ ಪಾತ್ರವನ್ನು ನವೀನ ರೀತಿಯಲ್ಲಿ ಸೃಷ್ಟಿಸಿದ್ದಾರೆ. ಪುರಾಣದಲ್ಲಿ ಚಿರಂಜೀವಿಯಾಗಿದ್ದ ಅಶ್ವತ್ಥಾಮನನ್ನು ನಾಟಕದಲ್ಲಿ ಸಾಯಿಸಿದ್ದಾರೆ. ಅದಕ್ಕೆ ಕಾರಣ ದೈವವನ್ನು ವಿರೋಧಿಸುವ ಮಾನವನಿಗೆ ಬದುಕಿಲ್ಲ ಎಂಬ ಗ್ರೀಕರ ಧೋರಣೆಯನ್ನು ಎತ್ತಿ ಹಿಡಿದಿದ್ದಾರೆ.

ಮಹಾಭಾರತದ ಕಥೆಯಲ್ಲಿ ನಿಸ್ಸಹಾಯಕನಾಗಿ, ಅಸಹಾಯಕನಾಗಿದ್ದ ಅಶ್ವತ್ಥಾಮ ಈ ನಾಟಕದಲ್ಲಿ ಘನವಾದ, ತೇಜಸ್ಸಿನಿಂದ ಕೂಡಿದ ವ್ಯಕ್ತಿತ್ವವನ್ನು ಪಡೆದು ಗ್ರೀಕರ ದುರಂತ ನಾಯಕರ ಸಾಲಿಗೆ ಸೇರಲ್ಪಟ್ಟಿದ್ದಾನೆ.

'ಅಶ್ವತ್ಥಾಮನ್' ನಾಟಕ ರಂಗಭೂಮಿಯ ಮೇಲೆ ಆಳವಾದ ಪ್ರಭಾವ ಬೀರಿ ಕೋಲಾಹಲವನ್ನುಂಟು ಮಾಡಿತು. ಬಿ.ಎಂ.ಶ್ರೀ. ಯವರ ಲೇಖನಿಯಿಂದ ಅಶ್ವತ್ಥಾಮ ಆತ್ಮಹತ್ಯೆ ಮಾಡಿಕೊಂಡರೂ ಬದುಕಿನಲ್ಲಿ ಚಿರಂಜೀವಿ ಎನಿಸಿಕೊಂಡಿದ್ದಾನೆ.

'ಬಿ.ಎಂ.ಶ್ರೀ.ಯವರ ಅನುವಾದ ಶೈಲಿ ಬೆರಗು ಹುಟ್ಟಿಸುವಂತಹುದು. ಇದರ ಭಾಷೆ ಹಳಗನ್ನಡ ಪ್ರಾಚೀನ ಕಥೆಯ ಗಾಂಭೀರ್ಯಕ್ಕೂ ರಸಕ್ಕೂ ಈ ಬಿಗಿಯಾದ ಹಳೆಗನ್ನಡ ಹೊಂದಿಕೊಂಡು ಪ್ರೇಕಕರನ್ನು ಮಹಾಭಾರತ ಕಾಲದ ಬನವಾಸಿಗೆ ಕರೆದುಕೊಂಡು ಹೋಗುತ್ತದೆ. 'ಅಶ್ವತ್ಥಾಮನ್' ನಾಟಕ ಅವರ ಕಲಾತ್ಮಕ, ಸಾಹಿತ್ಯಿಕ ಸಾಧನೆಯ ಒಂದು ಮೈಲಿಗಲ್ಲಾಗಿ ನಿಂತಿದೆ.

೩. 'ಪಾರಸಿಕರು':

'ಪಾರಸಿಕರು' ಬಿ.ಎಂ.ಶ್ರೀ.ಯವರು ರಚಿಸಿದ ಮೂರನೆಯ ನಾಟಕ. ೧೯೩೫ರಲ್ಲಿ ಈ ನಾಟಕ ಎರಡು ಕಂತುಗಳಲ್ಲಿ 'ಪ್ರಬುದ್ಧ ಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟವಾಯಿತು. ಇದು ಪ್ರಸಿದ್ಧ ಗ್ರೀಕ್ ನಾಟಕಕಾರ ಈಸ್ಕಿಲಸ್‌ನ 'The Parsae' ಎಂಬ ಕೃತಿಯ ಅನುವಾದ ನಾಟಕದ ಕಥಾವಸ್ತು ಈ ರೀತಿಯಿದೆ.

ಕ್ರಿ.ಪೂ. ೪೮೦ರಲ್ಲಿ ಪಾರಸಿಕರು ತಮ್ಮ ದೊರೆಯಾಗಿದ್ದ ಕ್ಷಯಾರ್ಷ್‌ನ ನೇತೃತ್ವದಲ್ಲಿ ಗ್ರೀಕರ ಮೇಲೆ ದಂಡೆತ್ತಿ ಬಂದಾಗ ನಡೆದ ಯುದ್ಧದ ಕಥೆಯನ್ನು ನಾಟಕ ಹೇಳುತ್ತದೆ. ಗ್ರೀಕರು ಪಾರಸಿಕರ ಹಡಗು ಪಡೆಯನ್ನು ಪುಡಿಪುಡಿಯಾಗಿಸಿ ಕಾಲಾಳುಗಳ ಸೈನ್ಯವನ್ನು ಪೂರ್ತಿಯಾಗಿ ಸೋಲಿಸಿ, ಚಕ್ರವರ್ತಿಯಾಗಿದ್ದ ಕ್ಷಯಾರ್ಷ್ ಹೇಗೋ ಬದುಕಿಕೊಂಡು ಹರಕು ಚಿಂದಿ ಬಟ್ಟೆ ತೊಟ್ಟು ಹಿಂತಿರುಗುವಂತೆ ಮಾಡುತ್ತಾರೆ. ಈ ಯುದ್ಧದಲ್ಲಿ ಈಸ್ಕಿಲಸ್ ಗೆದ್ದರೂ ಅದನ್ನು ಕುರಿತು ಬರೆದ ನಾಟಕವನ್ನು ಗ್ರೀಕರ ಜಯಗೀತೆಗಳನ್ನಾಗಿಸದೆ ಪಾರಸಿಕರ ಶೋಕಗೀತೆಯನ್ನಾಗಿಸುತ್ತಾರೆ ಎನ್ನುವುದು ಒಂದು ವಿಶೇಷ.

'ಪಾರಸಿಕರು' ನಾಟಕ ರಂಗಸ್ಥಳದಲ್ಲಿ ನಾಲ್ಕು ಹಂತಗಳಲ್ಲಿ ಪ್ರದರ್ಶನ ಗೊಳ್ಳುತ್ತದೆ. ಮೊದಲನೆಯ ಹಂತದಲ್ಲಿ ಆತಂಕ, ಭಯ, ಎರಡನೆಯ ಹಂತದಲ್ಲಿ ಸೋಲಿನ ವಿವರಣೆ, ಮೂರನೆಯ ಹಂತದಲ್ಲಿ ಕ್ಷಯಾರ್ಷ್‌ನ ಪುನರುತ್ಥಾನ ಕಡೆಯ ಹಂತದಲ್ಲಿ ಸೋಲೇಕಾಯಿತು. ಎಂಬ ವಿವರಣೆ ಮತ್ತು ಸೋಲಿಗಾಗಿ ದುಃಖಪಡುವುದು. ಒಟ್ಟಾರೆ 'ಪಾರಸಿಕರು ನಾಟಕದಲ್ಲಿ ಒಂದು ಸಾಮ್ರಾಜ್ಯದ ದುರಂತದ ಚಿತ್ರಣವಿದೆ. ಗ್ರೀಕ್ ನಾಟಕದ ಒಂದು ವಿಶಿಷ್ಟ ಸಂಪ್ರದಾಯದಂತೆ ಈ ನಾಟಕದಲ್ಲೂ ಮೇಳಗಾನ ದೂರವಾಗುವುದಿಲ್ಲ.

'ತಪ್ಪಿಗೆ ಶಿಕ್ಷೆ ತಪ್ಪಿದ್ದಲ್ಲ', 'ವಿಧಿಯನ್ನು ಮೀರಿದವರಿಲ್ಲ' ಎಂಬ ಎರಡೂ ವಿಚಾರಗಳನ್ನು ಆಧರಿಸಿಯೆ ಗ್ರೀಕರ ರುದ್ರನಾಟಕ ಪರಂಪರೆ ಬೆಳೆದಿದೆ. ಈ ಎರಡೂ ವಿಚಾರಗಳನ್ನು ಈ ನಾಟಕದಲ್ಲಿ ನಾವು ಕಾಣುತ್ತೇವೆ. ಕ್ಷಯಾರ್ಷ ತನ್ನ ಸಾಮ್ರಾಜ್ಯವನ್ನು ಕಳೆದುಕೊಂಡ ಎನ್ನುವುದಕ್ಕಿಂತ ಅವನ ಮೂಲಕ ಒಂದು ಮಹಾ ಸಾಮ್ರಾಜ್ಯವೇ ಅಳಿಯುವಂತಾಯಿತು ಎನ್ನುವುದು ಹೆಚ್ಚಿನ ಅರ್ಥ ವ್ಯಾಪ್ತಿಯನ್ನುಳ್ಳ ದುರಂತವಾಗುತ್ತದೆ.

ಈ ನಾಟಕದಲ್ಲಿ ಮೇಳ ಪಾರಸಿಕ ಜನಾಂಗವನ್ನು ಪ್ರತಿನಿಧಿಸುವ ಒಂದು ಸಮುದಾಯ ಪಾತ್ರವಾಗಿ ಹಿಂದಿನವರ ಬಗ್ಗೆ ಅಭಿಮಾನವನ್ನು, ಇಂದಿನವರ

ಶೋಕ ಪರಿತಾಪಗಳನ್ನು ಮುಂದಿನವರ ಬಗ್ಗೆ ಆತಂಕವನ್ನು ವ್ಯಕ್ತಪಡಿಸುವ ಕೆಲಸವನ್ನು ಮಾಡುತ್ತದೆ. ಇಡೀ ನಾಟಕದ ಅರ್ಧದಷ್ಟು ಪದ್ಯ ಪಂಕ್ತಿಗಳನ್ನು ಮೇಳದವರೇ ಹೇಳುತ್ತಾರೆ. ಅವು ಸನ್ನಿವೇಶಗಳಿಗೆ ತಕ್ಕಂತೆ ಹಾಡುಗಳಾಗಿ, ಭಾವಗೀತೆಗಳಾಗಿ ಹೊಮ್ಮುತ್ತದೆ. ಈ ಹಾಡುಗಳು ಭಾವದ ತೀವ್ರತೆಯನ್ನು ಹೆಚ್ಚಿಸುತ್ತವೆ. ಇಲ್ಲಿಯ ಅನೇಕ ಭಾವಗೀತೆಗಳು ಅನುವಾದಗಳೆಂದು ಗುರುತಿಸಲಾಗದ ಮಟ್ಟಿಗೆ ಸ್ವಂತಿಕೆಯನ್ನು ಪಡೆದಿವೆ. ಈ ಗೀತ ಭಾಗ ನಾಟಕದ ಅನುಭವವನ್ನು ಶ್ರೀಮಂತವಾಗಿಸಬಲ್ಲದು.

'ಪಾರಸಿಕರು' ನಾಟಕ ಚಿಕ್ಕದಾಗಿದ್ದರೂ ಹೃದಯಸ್ಪರ್ಶಿಯಾಗಿದೆ. ಮನುಷ್ಯನಿಗೂ ವಿಧಿಗೂ ನಡೆಯುವ ಹೋರಾಟವೇ ಗ್ರೀಕ್ ನಾಟಕಗಳ ಜೀವಾಳ.

ಬಿ.ಎಂ.ಶ್ರೀ.ಯವರ 'ಗದಾಯುದ್ಧ ನಾಟಕಂ' 'ಅಶ್ವತ್ಥಾಮನ್' ಮತ್ತು 'ಪಾರಸಿಕರು–ಈ ಮೂರು ನಾಟಕಗಳೂ ಗ್ರೀಕರ ರುದ್ರನಾಟಕಗಳ ಜೀವಾಳವನ್ನು ಒಳಗೊಂಡಿವೆ.

ಕನ್ನಡದಲ್ಲಿ ನಾಟಕಗಳಿಲ್ಲವೆಂದು ನಾಟಕ ಪ್ರಿಯರು ಹಂಬಲಿಸುತ್ತಿದ್ದಾಗ ಈ ನಾಟಕಗಳನ್ನು ಬರೆದು ಒಂದು ನೂತನ ಸಂಪ್ರದಾಯವನ್ನು ಹುಟ್ಟು ಹಾಕಿದರು. ಈ ನಾಟಕಗಳ ಹಿನ್ನೆಲೆ ದುರಂತವಾಗಿದ್ದರೂ ವಿಚಾರಶಕ್ತಿ ಮತ್ತು ಧರ್ಮಶ್ರದ್ಧೆಯ ಬೆಳಕನ್ನು ಬೀರುತ್ತವೆ. ಈ ನಾಟಕಗಳನ್ನು ಬರೆಯುವುದರ ಮೂಲಕ ಹಳೆಗನ್ನಡವನ್ನು ಯಶಸ್ವಿಯಾಗಿ ನಾಟಕದ ಭಾಷೆಯನ್ನಾಗಿ ಬಳಸಬಹುದು ಎನ್ನುವುದನ್ನು ತೋರಿಸಿಕೊಟ್ಟಿದ್ದಾರೆ. ಈ ಮೂರು ನಾಟಕಗಳಲ್ಲೂ ಅಸದಳ ಪಾಂಡಿತ್ಯ ಪ್ರತಿಭೆಗಳಿಂದ ಜರುಗುವ ನಾಟಕವಿಧಾನ ರೀತಿಯನ್ನು ದರ್ಶಿಸಿದ್ದಾರೆ. ಅತ್ಯಂತ ಶಿಸ್ತು, ಸಂಯಮದಿಂದ ಒಂದೊಂದು ನಾಟಕವೂ ಒಂದೊಂದು ಆದರ್ಶವನ್ನು ಎತ್ತಿಹಿಡಿಯುವ ಕೈಪಿಡಿಯಾಗಿದೆ. ಈ ನಾಟಕಗಳ ಹಿನ್ನೆಲೆ ದುರಂತ ವಿಚಾರಶಕ್ತಿ ಮತ್ತು ಧರ್ಮಶ್ರದ್ಧೆಯನ್ನು ಕೆರಳಿಸುತ್ತವೆ.

ಬಿ.ಎಂ.ಶ್ರೀ. ದುರಂತ ನಾಟಕಗಳನ್ನು ಬರೆದವರಲ್ಲಿ ಅಗ್ರಗಣ್ಯರು, ಪ್ರಯೋಗಶೀಲರು. ಹೊಸತನ್ನು ಸಾಹಿತ್ಯದಲ್ಲಿ ತರಲು ಆಸಕ್ತರಾಗಿದ್ದರು. ಅದರ ಫಲವಾಗಿ ಅವರ ಬಹುತೇಕ ಕೃತಿಗಳು ಹೊಸಗನ್ನಡದಲ್ಲಿ ರುದ್ರ ನಾಟಕಗಳ ರಚನೆಗೆ, ಅನುವಾದಕ್ಕೆ ದಾರಿಮಾಡಿಕೊಟ್ಟವು. ಅವರು ಸ್ವತಂತ್ರ ಕೃತಿಗಳನ್ನು ರಚಿಸಲಾರದೆ ಭಾಷಾಂತರ ಕಾರ್ಯವನ್ನು ಕೈಗೊಂಡವರಲ್ಲ. ಯಾಕೆಂದರೆ ಅವರ ಯಾವ ಕೃತಿಯೂ ನೇರ ಅನುವಾದವಲ್ಲ. ಉದ್ದಕ್ಕೂ ಸ್ವಾತಂತ್ರ್ಯವನ್ನು ಮೆರೆದು ತಮ್ಮ ಸ್ವಂತಿಕೆಯನ್ನು ವ್ಯಕ್ತಪಡಿಸಿದ್ದಾರೆ.

## ೪. ಕನ್ನಡ ಛಂದಸ್ಸಿನ ಚರಿತ್ರೆ

ಬಿ.ಎಂ.ಶ್ರೀ. ರಚಿಸಿರುವ 'ಕನ್ನಡ ಛಂದಸ್ಸಿನ ಚರಿತ್ರೆ'ಯ ಪ್ರಥಮ ಮುದ್ರಣ ೧೯೩೬ ರ ಕನ್ನಡ ಕೈಪಿಡಿ ಭಾಗ–೧ರಲ್ಲಿ ಪ್ರಕಟವಾಯಿತು. ಮೈಸೂರು ವಿಶ್ವ ವಿದ್ಯಾನಿಲಯ ೧೯೫೫, ೧೯೬೫ ಮತ್ತು ೧೯೭೧ರಲ್ಲಿ ಮರುಮುದ್ರಣಮಾಡಿತು.

'ಕನ್ನಡ ಛಂದಸ್ಸಿನ ಚರಿತ್ರೆ' ಯ ಮೊದಲನೆಯ ಮುದ್ರಣದಲ್ಲಿರುವ ಯಾವ ಭಾಗಗಳನ್ನು ಯಾರು ಬರೆದರು ಎನ್ನುವುದನ್ನು ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದ ಅವರೇ ಸ್ಪಷ್ಟಪಡಿಸಿದ್ದಾರೆ. ಆದರೆ ಎರಡನೆಯ ಮುದ್ರಣಕ್ಕೆ ಬರೆದ ಮುನ್ನುಡಿಯಲ್ಲಿ ಕೆಲವು ಬದಲಾವಣೆಗಳಾಗಿರುವುದಲ್ಲದೆ, 'ಕನ್ನಡ ಛಂದಸ್ಸಿನ ಚರಿತ್ರೆ' ಎಂಬ ಒಂದು ಹೊಸ ಪ್ರಕರಣವನ್ನು ಸೇರಿಸಲಾಗಿದೆ. ಅದನ್ನು ಬರೆದವರು ಯಾರು ಎನ್ನುವುದನ್ನು ತಿಳಿಸದಿದ್ದರೂ ಬರೆದವರು ಅವರೇ ಎನ್ನುವುದರಲ್ಲಿ ಸಂದೇಹವಿಲ್ಲ.

ಹಿಂದಿನ ಕಾಲದ ಕವಿಗಳು ಸಂಸ್ಕೃತ ಪಂಡಿತರಾಗಿದ್ದು ಸಂಸ್ಕೃತ ಭಾಷೆಯಲ್ಲಿರುವ ರಾಮಾಯಣ, ಮಹಾಭಾರತ, ಭಾಗವತ, ಪುರಾಣಗಳು, ಮಹಾಕಾವ್ಯಗಳು, ನಾಟಕಗಳನ್ನು ರಚಿಸುವಾಗ ಸಂಸ್ಕೃತದ ಛಂದಸ್ಸಿನ ಪ್ರಭಾವಕ್ಕೊಳಗಾಗಿದ್ದರು. ಸಂಸ್ಕೃತದಲ್ಲಿ ವೈದಿಕ ಛಂದಸ್ಸು, ಲೌಕಿಕ ಛಂದಸ್ಸು ಎಂದು ಎರಡು ವಿಧಗಳುಂಟು. ವೈದಿಕ ಛಂದಸ್ಸನ್ನು ವೇದಗಳಲ್ಲಿ, ಲೌಕಿಕ ಛಂದಸ್ಸನ್ನು ಇತಿಹಾಸ, ಪುರಾಣ, ಕಾವ್ಯ, ನಾಟಕಗಳಲ್ಲಿ ಕಾಣಬಹುದು.

ಬಿ.ಎಂ.ಶ್ರೀ. ಹೊಸಗನ್ನಡ ಛಂದಸ್ಸಿನ ಹರಿಕಾರರಲ್ಲಿ ಪ್ರಮುಖರು. ಸಂಸ್ಕೃತ, ಇಂಗ್ಲಿಷ್, ಗ್ರೀಕ್, ತಮಿಳು ಮೊದಲಾದ ಭಾಷೆಗಳಲ್ಲಿರುವ ಹಳೆಯ ಮತ್ತು ಹೊಸ ಛಂದಸ್ಸುಗಳ ಗುಣಲಕ್ಷಣಗಳು ಯಥೋಚಿತವಾಗಿ ಪ್ರತಿಬಿಂಬಿಸುವಂತೆ ಮಾಡಿದ್ದಾರೆ. ಗಣರಚನೆ, ಪಾದ ರಚನೆಯಲ್ಲಿ ಮೊದಲ ಸಲ ಹೊಸಗನ್ನಡ ಛಂದಸ್ಸಿನ ಪ್ರಯೋಗ ಮಾಡಿದರು. ಹಳೆಯ ಛಂದಸ್ಸುಗಳನ್ನು ವಿರಳವಾಗಿ ಬಳಸಿ ಅವುಗಳ ಕಟ್ಟು ಕಟ್ಟಲೆಗಳನ್ನು ಬದಲಾಯಿಸಿ ಬಳಸಿದರು.

ಈ ಕೃತಿಯಲ್ಲಿ ಅವರು ಕನ್ನಡ ಛಂದಸ್ಸನ್ನು ಚರಿತ್ರೆಯ ದೃಷ್ಟಿಯಿಂದ ವಿಮರ್ಶಿಸಿದ್ದಾರೆ. ವೃತ್ತ, ಕಂದಗಳ ಮೇಲಾಗುವ ಭಾಷಾ ವ್ಯತ್ಯಾಸದ ಪರಿಣಾಮವನ್ನು ನಿರೂಪಿಸಿದ್ದಾರೆ. ಕನ್ನಡ ಪದ್ಯಗಳ ಲಕ್ಷಣ ಮತ್ತು ಚರಿತ್ರೆಯ ವಿಭಾಗದಲ್ಲಿರುವ ತ್ರಿಪದಿ, ಅಕ್ಷರ ಮತ್ತಿತ್ತರ ಪ್ರಭೇದಗಳಾದ ಮದನವತಿ, ಚೌಪದಿ ಗೀತಿಕೆ, ಸಾಂಗತ್ಯ, ಏಳೆ, ರಗಳೆ, ಷಟ್ಪದಿಗಳನ್ನು ಕುರಿತು ವಿವರಣೆ ನೀಡಿದ್ದಾರೆ.

ತಮಿಳು ಛಂದಸ್ಸನ್ನು ಕುರಿತು ವಿಚಾರ ಮಾಡಿರುವುದಲ್ಲದೆ ಉದಾಹರಣೆಗಳಿಂದ ತಿಳಿಗನ್ನಡಕ್ಕೂ ತಮಿಳಿಗೂ ಇರುವ ಹತ್ತಿರದ ಸಂಬಂಧ, ಇಂಗ್ಲಿಷ್ ಛಂದಸ್ಸಿನ ಪ್ರಭಾವ ಇತ್ಯಾದಿಗಳನ್ನು ಉಲ್ಲೇಖಿಸಿದ್ದಾರೆ.

'ಕನ್ನಡ' ಛಂದಸ್ಸಿನ ಚರಿತ್ರೆ, ಕನ್ನಡ ಛಂದಸ್ಸಿನ ಬೆಳವಣಿಗೆಯನ್ನು ಕುರಿತು ಬರೆಯುವವರಿಗೆ ಆಧಾರವಾಗಿದೆ' ಎಂದು ಡಾ: ಡಿ.ಎಲ್. ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿದ್ದಾರೆ. "ಇಂಗ್ಲಿಷ್ ಗೀತಗಳು", 'ಕೃತಿಯ ಹೊಸತನವಿರುವುದು ಬಿ.ಎಂ.ಶ್ರೀ. ಯವರ ಹೊಸ ಛಂದಸ್ಸಿನಲ್ಲಿ ಎಂದಿದ್ದಾರೆ ಎಸ್. ಅನಂತ ನಾರಾಯಣ.

### ೫. ಕನ್ನಡ ಬಾವುಟ (ಸಂಪಾದಿತ ಸಂಕಲನ)

ಬಿ.ಎಂ.ಶ್ರೀ.ಯವರಿಗೆ ಬಹಳ ವರ್ಷಗಳಿಂದ ಕನ್ನಡ ನಾಡಿನ ಏಳನೆಯ ಶತಮಾನದಿಂದ ೨೦ ನೇ ಶತಮಾನದವರೆಗಿನ ಅಂದರೆ ಹಿಂದಿನ, ಇಂದಿನ ಹೆಮ್ಮೆಯ ಕವಿಗಳ ಕವನಗಳನ್ನು ಸಂಪಾದಿಸಿ ಒಂದು ಸಂಕಲನವನ್ನು ಪ್ರಕಟಿಸುವ ಅಭಿಲಾಷೆಯಿತ್ತು. ಕನ್ನಡ ಕವಿಗಳ ಶ್ರೇಷ್ಠ ಕವನಗಳನ್ನು ಆಯ್ಕೆ ಮಾಡಿ 'ಕನ್ನಡ ಬಾವುಟ' ಎಂಬ ಕವನ ಸಂಕಲನವನ್ನು ೧೯೩೮ ರಲ್ಲಿ ಪ್ರಕಟಿಸಿದರು. ಅದು ಅವರು ಸಂಪಾದಿಸಿದ ಏಕಮಾತ್ರ ಕವನ ಸಂಕಲನ. ಬೇರೆ ಬೇರೆ ಕವಿಗಳ ಕವನಗಳಿರುವ ಪ್ರಥಮ ಸಂಕಲನ.

'ಈ ಗ್ರಂಥ ಮಾನವನ ಸರ್ವಸ್ವದ ಕುರುಹು' ಎಂದು ಅವರು ಕರೆದು ಜನತೆಗೆ ಅರ್ಪಿಸಿದರು. ಈ ಘನ ಕಾರ್ಯಕ್ಕೆ ನೆರವಾದವರು ವಿ.ಸೀತಾರಾಮಯ್ಯ ಮತ್ತು ಕೆ.ವಿ.ರಾಘವಾಚಾರ್ಯರು. ಈ ಕವನ ಸಂಕಲನವನ್ನು ಕುರಿತು ಬಿ.ಎಂ.ಶ್ರೀ ಹೀಗೆ ಹೇಳಿದ್ದಾರೆ:-

"ಕನ್ನಡ ನಾಡು ಎಚ್ಚೆತ್ತುಕೊಳ್ಳುತ್ತಿರುವ ಈ ಸಂತೋಷ, ಸಡಗರದಲ್ಲಿ ಕನ್ನಡ ನಾಡಿನ ಹೆಮ್ಮೆಯನ್ನು ಹಾಡಿರುವ ಕವಿಗಳಿಂದ ಆಯ್ದು ತಿರುಳೊಂದನ್ನು ಹಂಚಬೇಕೆಂಬ ಬಯಕೆ ಬಹುಕಾಲದಿಂದ ನನ್ನಲ್ಲಿ ಕಡೆದು ಕುದಿಯುತ್ತಿತ್ತು. ಹಿಂದಿನ ಹಿರಿಯ ಕವಿಗಳು, ಇಂದಿನ ಕವಿಗಳು ಕನ್ನಡ ತಾಯ ಪಾದದಲ್ಲಿ ಒಪ್ಪಿಸಿದ್ದ ಹೂವುಗಳನ್ನು ಬಾಚಿ ತೆಗೆದು ಮೂವತ್ತು ವರ್ಷಗಳಿಂದ ನನ್ನೆದೆಯಲ್ಲಿ ತುಂಬಿ ಚಿಮ್ಮುತ್ತಿದ್ದವು. ಅವುಗಳನ್ನು ಇಲ್ಲಿ ದಂಡೆ ಕಟ್ಟಿದ್ದೇನೆ. ತಾಯಡಿಯ ಹೂವುಗಳಿವು.

ಏಳನೆಯ ಶತಮಾನದಿಂದ ೨೦ ನೇ ಶತಮಾನದವರೆಗಿನ ಕನ್ನಡ ಬೆಳೆಯನ್ನು ೧. ಶಾಸನಗಳು ೨. ಪೂರ್ವ ಸಾಹಿತ್ಯ ೩. ನಾಡಪದಗಳು, ೪. ಇಂದಿನ ಹೊಸ ಕವಿತೆ–ಈ ನಾಲ್ಕು ತೆನೆಗಳಲ್ಲಿ ತೋರಿಸಿದ್ದೇನೆ.

ಬಗೆಬಗೆಯ ಛಂದಸ್ಸಿನ ಕುಣಿತ, ಕಾಲಕಾಲದ ಭಾಷೆಯ ಮಾರ್ಪಾಡು, ಕನ್ನಡ ನಾಡಿನ ಸೊಬಗು, ಧರ್ಮಗಳು, ಮಹಾವ್ಯಕ್ತಿಗಳು, ಜೀವನ ಗುರುಗಳು, ಬೇರೆ ಬೇರೆ ಪ್ರಾಂತ್ಯದ ಪ್ರೇಮಿಗಳು, ಹಿಂದಿನ ಮಹತ್ವದ ಸಂಸ್ಕಾರ ಸಂಸ್ಕೃತಿ, ಇಂದಿನ ಮಹತ್ವದ ಧ್ಯೇಯ, ಯೋಜನೆಗಳು, ನಾಡು ನುಡಿಯ ಮಿಡಿತ ನನಗೆ ತಿಳಿದಂತೆ "ಕನ್ನಡ ಬಾವುಟ'ದ ಅಡಿಯಲ್ಲಿ ಎರಡು ಸಾವಿರ ವರ್ಷಗಳ ಜೀವಾಳವನ್ನು ತೆನೆಗಳಾಗಿ ಆಯ್ದು ಲೆಕ್ಕ ಮಾಡಿ ಕನ್ನಡಿಗರ ಕೈಗೆ ಒಪ್ಪಿಸಿದ್ದೇನೆ. ಕನ್ನಡಿಗರ ಸಮುದಾಯ ಜೀವನಕ್ಕೆ ನಿಷ್ಠೆಯ ಸಂಕೇತವಾಗಿ ಈ ಕನ್ನಡ ಬಾವುಟವನ್ನು ಒಪ್ಪಿಸಿ ಮನುಷ್ಯ ತನ್ನ ಸರ್ವಸ್ವವನ್ನು ಯಾವುದಕ್ಕೆ ಒಪ್ಪಿಸಲು ಸಿದ್ದನಾಗಿರುವನೊ ಅದರ ಕುರುಹು."

ಈ ಕವನ ಸಂಕಲನವನ್ನು ಬೆಂಗಳೂರಿನಲ್ಲಿರುವ 'ಕನ್ನಡ ಸಾಹಿತ್ಯ ಪರಿಷತ್ತು ೧೯೪೮ ಮತ್ತು ೧೯೫೪ ರಲ್ಲಿ ಮರುಮುದ್ರಣ ಮಾಡಿತು.

## ೬. ಹೊಂಗನಸುಗಳು

ಮನಮೋಹಕವಾದ ಹೆಸರನ್ನು ಪಡೆದಿರುವ 'ಹೊಂಗನಸುಗಳು' ಬಿ.ಎಂ.ಶ್ರೀ.ಯವರ ಏಕೈಕ ಬಿಡಿ ಕವನಗಳ ಸಂಕಲನ. ಆ ಕೃತಿಯನ್ನು ಅವರೇ ೧೯೪೩ ನೇ ಇಸವಿ ಡಿಸೆಂಬರ್ ತಿಂಗಳಿನಲ್ಲಿ ಪ್ರಕಟಿಸಿ ತಮ್ಮ ಅರವತ್ತರ ಹುಟ್ಟಿದ ಹಬ್ಬದ ಪ್ರಯುಕ್ತ ಬಂಧುಮಿತ್ರರಿಗೆ ಹಂಚಿದರು. ೧೯೪೮ರಲ್ಲಿ 'ವಿಶ್ವಸಾಹಿತ್ಯ ಮಾಲೆ', ೧೯೭೯ ರಲ್ಲಿ 'ಕನ್ನಡ ಕವಿ ಕಾವ್ಯಮಾಲೆ' ಮರುಮುದ್ರಣ ಮಾಡಿದವು. ಈ ಸಂಕಲನದಲ್ಲಿ ಸ್ವಾತಂತ್ರಪೂರ್ವದಲ್ಲಿ ಬರೆದ ಹದಿನಾಲ್ಕು ಕವನಗಳಿವೆ.

೧. ಭಾರತ ಮಾತೆಯ ನುಡಿ – ೧೯೧೪
೨. ಮೈಸೂರು ಮಕ್ಕಳು – ೧೯೨೦
೩. ಕನ್ನಡ ಹೆಣ್ಣು – ೧೯೨೧
೪. ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ
೫. ಕನ್ನಡ ತಾಯ ನೋಟ – ೧೯೩೬
೬. ಕನ್‌ನಡದ ಬೇವುಟ – ೧೯೩೯
೭. ಬಾನ್‌ಕೊಂಡ ಕೃಷ್ಣನ್ – ೧೯೪೦
೮. ಶ್ರೀ ಜಯನ ಬೆಳಕು – ೧೯೪೦
೯. ಅರಮನೆಯ ಒಸಗೆ – ೧೯೪೧
೧೦. ಶುಕ್ರಗೀತೆ – ೧೯೪೧

೧೧. ಪಂಪನ ಒರತೆ – ೧೯೪೧

೧೨. ಧರ್ಮಯುದ್ಧ – ೧೯೪೩

೧೩. ಶಿಲಪ್ಪದಿಗಾರಂ – ೧೯೪೩ (ಮುನ್ನುಡಿ)

೧೪. ಹಾರೈಕೆ – ೧೯೪೫.

ಈ ಹದಿನಾಲ್ಕು ಕವನಗಳನ್ನು ಸ್ಥೂಲವಾಗಿ ೧. ಕನ್ನಡ ನಾಡು ನುಡಿಯನ್ನು ಕುರಿತ ಕವನಗಳು ೨. ರಾಜಭಕ್ತಿಯನ್ನು ಪ್ರಕಟಿಸಿರುವ ಕವನಗಳು ೩. ಇತರ ಕವನಗಳು ಎಂದು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಕಾಲಾನುಕ್ರಮದಲ್ಲಿ ಅವುಗಳನ್ನು ಸಂಕಲನದಲ್ಲಿ ಪ್ರಕಟಿಸಲಾಗಿದೆ.

'ಭಾರತ ಮಾತೆಯ ನುಡಿ' ಕವನದಲ್ಲಿ ಕವಿ ದೇಶದ ಸ್ವಾತಂತ್ರ್ಯವನ್ನು ಬಯಸಿದರೆ 'ಮೈಸೂರು ಮಕ್ಕಳು' ಕವನದಲ್ಲಿ ಕನ್ನಡ ನಾಡಿನ ಸೊಗಸು ಮತ್ತು ನಾಲ್ವಡಿ ಕೃಷ್ಣರಾಜರ ಆಡಳಿತದ ವೈಭವದ ಸಂಗಮವಿದೆ. 'ಕನ್ನಡದ ಹೆಣ್ಣು' ವಿಶಿಷ್ಟವಾದ ಕವನ. ನಮ್ಮ ಕನ್ನಡನುಡಿ, ನಮ್ಮ ಹೆಣ್ಣು ನಮ್ಮ ತೋಟದ ಹಣ್ಣು ಎಂದು ವರ್ಣಿಸಿದ್ದಾರೆ. 'ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ' ಕವನದಲ್ಲಿ ನಾಲ್ವಡಿ ಕೃಷ್ಣರಾಜರ ಇಪ್ಪತ್ತೈದು ವರ್ಷಗಳ ವೈಭವದ ಆಳ್ವಿಕೆಯನ್ನು ಸುಂದರವಾಗಿ ಚಿತ್ರಿಸಿದ್ದಾರೆ. 'ಕನ್ನಡ ತಾಯ ನೋಟ' ವಿಜಯನಗರ ಸಾಮ್ರಾಜ್ಯದ ಆರುನೂರು ವರ್ಷದ ಹಬ್ಬದ ಸಂದರ್ಭದಲ್ಲಿ ರಚಿಸಿದ ಕವನ. ಈ ಕವನದಲ್ಲಿ ಕವಿ ಕನ್ನಡ ತಾಯಿಯ ನೊಂದ ನುಡಿಗೆ ಸಾಂತ್ವನ ನೀಡಿದ್ದಾರೆ. 'ಕನ್‌ನಡದ ಬೀವುಟ' ಕವನದಲ್ಲಿ ಕವಿ ಕನ್ನಡ ಲಿಪಿಯಲ್ಲಿ ಸುಧಾರಣೆ ತರಲು ಪ್ರಯತ್ನಿಸಿದ್ದಾರೆ. 'ಬಾನ್ ಕೊಂಡ ಕೃಷ್ಣನ್' ನಾಲ್ವಡಿ ಕೃಷ್ಣರಾಜ ಒಡೆಯರು ತೀರಿಕೊಂಡಾಗ ಬರೆದ ಶೋಕರೂಪದ ಕವನ, 'ಶ್ರೀ ಜಯನ ಬೆಳಕು' ಮತ್ತು 'ಅರಮನೆಯ ಒಸಗೆ' ಕವನಗಳಲ್ಲಿ ಕವಿಯ ರಾಜಭಕ್ತಿ ವ್ಯಕ್ತವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದ ಬೆಳ್ಳಿಹಬ್ಬದ ಕವಿ ಸಮ್ಮೇಳನದಲ್ಲಿ ಬಿ.ಎಂ.ಶ್ರೀ. ಬರೆದು ಓದಿದ ಕವನ 'ಶುಕ್ರಗೀತೆ' ಕವನ ಓದುವುದಕ್ಕೆ ಮೊದಲು ಅವರು ಉಪನಿಷತ್ತಿನ ಶ್ಲೋಕವನ್ನು ಉಲ್ಲೇಖಿಸಿದ್ದುಂಟು.–ಪಂಪನನ್ನು ಕುರಿತು ಬರೆದ ಕವನ 'ಪಂಪನ ಭಾರತ' ಆತ ಜನಿಸಿ ಸಾವಿರ ವರ್ಷಗಳ ನೆನಪಿನಲ್ಲಿ ಬರೆದ ಕವನ. 'ಧರ್ಮಯುದ್ಧ' ಕವನವನ್ನು ಷಷ್ಪದಿಯಲ್ಲಿ ಬರೆದಿರುವುದು ಒಂದು ವಿಶೇಷ. 'ಶಿಲಪ್ಪನಿಗಾರಂ' ಪ್ರಸಿದ್ಧ ತಮಿಳು ಭಾಷೆಯ ಕಾವ್ಯದ ಕನ್ನಡದ ಅನುವಾದ. 'ಹಾರೈಕೆ' ಕವಿಯ ಅಂತಿಮ ಕವನ. ಮದ್ರಾಸಿನಲ್ಲಿ ನಡೆದ ೨೯ ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅನಾರೋಗ್ಯದಿಂದಾಗಿ ಹೋಗಲಾಗದೆ ಈ

ಕವನವನ್ನು ಬರೆದು ಕಳುಹಿಸುವುದರ ಮೂಲಕ ಸಮ್ಮೇಳನಕ್ಕೆ ಶುಭ ಕೋರಿದರು. ಕವನವನ್ನು ಕುರುಳು ಧಾಟಿಯಲ್ಲಿ ತ್ರಿಪದಿಯಲ್ಲಿ ರಚಿಸಲಾಗಿದೆ. ಒಟ್ಟು ಹತ್ತು ತ್ರಿಪದಿಗಳಿದ್ದು ಹಳೆಗನ್ನಡ ಮತ್ತು ತಮಿಳು ಮಿಶ್ರಿತ ಭಾಷೆಯಲ್ಲಿದೆ. ಶ್ರೀ ಜಯ ಚಾಮರಾಜ ಒಡೆಯರ ಪ್ರಾರ್ಥನೆಯೊಂದಿಗೆ ಈ ಕವನ ಸಂಕಲನ ಮುಕ್ತಾಯಗೊಳ್ಳುತ್ತದೆ.

## ೭. ಕನ್ನಡ ಸಾಹಿತ್ಯದ ಚರಿತ್ರೆ

ಒಂದು ಭಾಷೆಯ ಸಾಹಿತ್ಯ ಚರಿತ್ರೆಯೆಂದರೆ ಆ ಭಾಷೆಯಲ್ಲಿ ರಚಿಸಲ್ಪಟ್ಟಿರುವ ಗ್ರಂಥಗಳು. ಅವುಗಳನ್ನು ಹುಡುಕಿಸಿ, ಬರೆದ ಕವಿ ಮತ್ತು ಕಾಲವನ್ನು ನಿರ್ಣಯಿಸಿ ಪ್ರಕಟಿಸಿ, ಅವುಗಳ ಗುಣದೋಷಗಳನ್ನು ವಿಮರ್ಶಿಸುವುದು ಸಾಹಿತ್ಯ ಚರಿತ್ರೆಗೆ ಸಹಕಾರಿಯಾದ ಕಾರ್ಯಗಳು.

ಆ ಕಾಲದಲ್ಲಿ ಕನ್ನಡದ ಗ್ರಂಥಗಳು ಆಯಾಮತದ ಮಠ ಮತ್ತು ವಿದ್ವಾಂಸರ ಭಂಡಾರಗಳಲ್ಲಿರುತ್ತಿದ್ದವು. ಯಾಕೆಂದರೆ ಆ ಪುಸ್ತಕಗಳನ್ನು ಪಂಡಿತರಲ್ಲದೆ ಸಾಮಾನ್ಯರು ಓದುತ್ತಿರಲಿಲ್ಲ. ೧೯ ನೇ ಶತಮಾನದಲ್ಲಿ ಕ್ರೈಸ್ತ ಪಾದ್ರಿಗಳು ಮತ ಪ್ರಚಾರಕ್ಕಾಗಿ, ಭಾಷಾಜ್ಞಾನಕ್ಕಾಗಿ ಕನ್ನಡ ಕಾವ್ಯಗಳು, ನಿಘಂಟು, ವ್ಯಾಕರಣ ಮುಂತಾದ ಗ್ರಂಥಗಳನ್ನು ಪ್ರಕಟಿಸಿದರು.

ಪಾಶ್ಚಾತ್ಯ ಪಂಡಿತ ಕಿಟ್ಟಲ್ ಕೆಲವರ ಸಹಾಯ ಪಡೆದು ಬಸವ ಪುರಾಣ, ಚನ್ನಬಸವ ಪುರಾಣ, ಜೈಮಿನಿ ಭಾರತ, ದಾಸರ ಪದಗಳು ಮುಂತಾದ ಗ್ರಂಥಗಳ ಮರುಮುದ್ರಣ ಮಾಡಿ ಕೇಶರಾಜನ ಶಬ್ದಮಣಿ ದರ್ಪಣ, (೧೮೭೨) ನಾಗವರ್ಮನ ಛಂದೋಬುಧಿಯನ್ನು ಮುದ್ರಣ ಮಾಡಿದರು. (೧೮೭೫) ರಲ್ಲಿ ಕನ್ನಡ-ಇಂಗ್ಲಿಷ್ ನಿಘಂಟು, ೧೮೯೪ ರಲ್ಲಿ ಕನ್ನಡ ವ್ಯಾಕರಣ ಪ್ರಕಟಿಸಿದಾಗ ಅದು ಕನ್ನಡ ಸಾಹಿತ್ಯದ ಚರಿತ್ರೆಯ ಮೊದಲ ಮೆಟ್ಟಲಾಯಿತೆನ್ನಬಹುದು.

ಮೈಸೂರು ಸರ್ಕಾರದ ವಿದ್ಯಾಭ್ಯಾಸ ಮತ್ತು ಪುರಾತನ ವಿಷಯ ಶೋಧನೆಯ ಇಲಾಖೆಗಳ ಅಧ್ಯಕ್ಷರಾಗಿದ್ದ ಲೂಯಿಸ್ ರೈಸ್ ಕನ್ನಡ ಭಾಷೆಯ ಮೇಲಿದ್ದ ಅಭಿಮಾನದಿಂದಾಗಿ ವಿದ್ಯಾಭ್ಯಾಸಕ್ಕೆ ಗ್ರಂಥಗಳ ಅವಶ್ಯಕತೆಯನ್ನು ಪೂರೈಸುವ ದೃಷ್ಟಿಯಿಂದ ನೃಪತುಂಗನ ಕವಿರಾಜಮಾರ್ಗ, ನಾಗವರ್ಮನ ಪಂಪಭಾರತ ಮುಂತಾದ ಪ್ರಸಿದ್ಧ ಕಾವ್ಯಗಳನ್ನು ಮುದ್ರಿಸಿದರು.

ಈ ವಿದೇಶಿ ಪಂಡಿತರಿಗೆ ನೆರವಾದವರು ಕನ್ನಡ ಸಾಹಿತ್ಯ ಭಕ್ತರಾಗಿದ್ದ ಬಿ.ಮಲ್ಲಪ್ಪ, ಎಸ್.ಜಿ.ನರಸಿಂಹಾಚಾರ್ಯರು, ಎಂ.ವಿ.ರಾಮಾನುಜ ಐಯ್ಯಂಗಾರರು. ಅಪ್ರತಿಮ ವೀರಚರಿತೆ, ಗದಾಯುದ್ಧ, ಆದಿಪುರಾಣ, ಚಂದ್ರಪ್ರಭ

ಪುರಾಣ, ಜಗನ್ನಾಥ ವಿಜಯ, ಗಿರಿಜಾ ಕಲ್ಯಾಣ, ಚಿಕ್ಕದೇವರಾಯ ಭಿನ್ನಪ, ಗೀತಗೋಪಾಲ, ಹರಿಶ್ಚಂದ್ರ ಕಾವ್ಯ ಮುಂತಾದ ಪುರಾತನ ಕಾವ್ಯಗಳನ್ನು, ದಿವ್ಯಮಂಜರಿ, ಕಾವ್ಯ ಕಲಾನಿಧಿ ಎಂಬ ಪತ್ರಿಕೆಗಳನ್ನು ಮುದ್ರಿಸಿದರು. ಜನಸಾಮಾನ್ಯರಿಗೆ ಪ್ರಿಯವಾದ ಭಾರತ, ಭಾಗವತ, ರಾಮಾಯಣ, ಸರ್ವಜ್ಞ ಮೂರ್ತಿಯ ವಚನಗಳು, ಪ್ರಭುಲಿಂಗಲೀಲೆ, ಬಸವ ಪುರಾಣ ಮುಂತಾದ ಗ್ರಂಥಗಳನ್ನು ಪ್ರಕಟಿಸಿದರು. ಈ ಗ್ರಂಥಗಳಿಗೆ ಕಾರಣ ಅರಮನೆ, ಮಠ, ಶ್ರೀಮಂತರ, ವಿದ್ವಾಂಸರ ಮನೆಗಳಲ್ಲಿ ದೊರೆತ ಓಲೆಗರಿಯ ಹಾಗೂ ಕಾಗದದ ಹಸ್ತಪ್ರತಿಗಳು.

೧೯೪೭ ರಲ್ಲಿ ಕನ್ನಡ ಕೈಪಿಡಿಯ ಸಂಪುಟದಲ್ಲಿ ಬಿ.ಎಂ.ಶ್ರೀ. ಯವರ 'ಕನ್ನಡ ಸಾಹಿತ್ಯ ಚರಿತ್ರೆ' ಪ್ರಕಟವಾಯಿತು. ಸುಮಾರು ೨೦೦ ಪುಟಗಳಿರುವ ಈ ಗ್ರಂಥ ಮೊಟ್ಟ ಮೊದಲನೆಯ 'ಕನ್ನಡ ಸಾಹಿತ್ಯದ ಚರಿತ್ರೆ' ಎನ್ನಬಹುದು. ಈ ಗ್ರಂಥದಲ್ಲಿ ನಾಲ್ಕು ಭಾಗಗಳಿವೆ.

೧. ಆರಂಭ ಕಾಲ (೧೦ನೇ ಶತಮಾನದವರೆಗೆ)

೨. ಮತ ಪ್ರಾಬಲ್ಯ ಕಾಲ (೧೦ನೆಯ ಶತಮಾನದಿಂದ)

೩. ಜೈನ ಕವಿಗಳು : (೧೦–೧೯ ನೆಯ ಶತಮಾನದವರೆಗೆ

ವೀರಶೈವಕವಿಗಳು, ಹನ್ನೆರಡನೆಯ ಶತಮಾನದವರೆಗೆ

೪. ಬ್ರಾಹ್ಮಣ ಕವಿಗಳು, (ಮುಖ್ಯವಾಗಿ) ೧೫ ನೆಯ ಶತಮಾನದಿಂದ ೧೯ ನೇ ಶತಮಾನದವರೆಗಿನ ಕವಿಗಳು ಬರೆದ ಗ್ರಂಥಗಳನ್ನು ಶಾಸನಗಳ ಆಧಾರದಿಂದ ನಿಶ್ಚಯಿಸಬಹುದಾದ ಸಾಹಿತ್ಯ ಚರಿತ್ರೆಯನ್ನು ಬಿ.ಎಂ.ಶ್ರೀ ಸಂಗ್ರಹಿಸಿದ್ದಾರೆ.

**ನವೀನ ಕಾಲ**

೧. ಕನ್ನಡ ಸಾಹಿತ್ಯದ ಆರಂಭ ಯಾವಾಗ ಆಯಿತೆಂದು ಹೇಳುವುದು ಕಷ್ಟವಾದರೂ ೬ ನೆಯ ಶತಮಾನದಿಂದ ಕನ್ನಡದಲ್ಲಿ ಬರೆದಿರುವುದು ಸಿಕ್ಕುತ್ತವೆ. ೯ನೆಯ ಶತಮಾನದಿಂದೀಚೆಗೆ, ಎಂದರೆ ಪಂಪನ ಕಾಲದಿಂದೀಚೆಗೆ, ಉತ್ತಮವಾದ ಕಾವ್ಯಶೈಲಿಯಲ್ಲಿ ಗದ್ಯಪದ್ಯಗಳುಳ್ಳ ದೊಡ್ಡ ಶಾಸನಗಳು ದೊರೆಯುತ್ತವೆ. ೮೧೭ ರಿಂದ ೮೭೭ ರವರೆಗೆ ಆಳಿದ ರಾಷ್ಟ್ರಕೂಟದ ರಾಜನಾದ ನೃಪತುಂಗನ ಕವಿರಾಜಮಾರ್ಗವೇ ಸಿಕ್ಕಿರುವ ಗ್ರಂಥಗಳಲ್ಲಿ ಅತಿ ಪುರಾತನವಾದದ್ದು, ಭಾರತ, ಭಾಗವತ, ಹರಿವಂಶ, ರಾಮಾಯಣ, ಪುರಾಣಗಳು ಪ್ರಸಿದ್ಧಿಯಾಗಿದ್ದವು. ಕನ್ನಡದ ಆರಂಭ ಕಾಲದ ಕವಿಗಳೆಲ್ಲರೂ ಸಂಸ್ಕೃತ ಸಾಹಿತ್ಯದ ಉತ್ತಮ ಕಾಲದ ಕವಿಗಳ ಬೆಂಬಲದಿಂದ ಕವಿತ್ವ ಮಾಡಿದರೆಂಬುದು ಸ್ಪಷ್ಟವಾಗಿದೆ. ಕನ್ನಡ ಕವಿಗಳು

ಭಾವ, ರೀತಿ, ವಸ್ತುಗಳಲ್ಲದೆ ಗ್ರಂಥಗಳ ರೂಪದಲ್ಲಿಯೂ ಸಂಸ್ಕೃತ ಕವಿಗಳನ್ನು ಅನುಸರಿಸಿದ್ದಾರೆ.

ಕ್ರಿ.ಶ. ೬–೭ನೆಯ ಶತಮಾನದವರೆಗೆ ಕನ್ನಡ ಜನರಲ್ಲಿ ಸಂಸ್ಕೃತವಿದ್ಯೆಯೂ ಮತಜ್ಞಾನವೂ, ಇತಿಹಾಸ ಪುರಾಣ ಪುಣ್ಯಕಥೆಗಳೂ, ಶಾಸ್ತ್ರಗಳೂ, ಪ್ರಾಕೃತ ಸಂಸ್ಕೃತ ಶಬ್ದಗಳಿಂದ ಭಾಷಾ ಚೈತನ್ಯವೂ ಹೆಚ್ಚುತ್ತ ಬಂದು ಬಳಿಕ ಕನ್ನಡ ವಿಶ್ವವು ಆರಂಭವಾಯಿತೆನ್ನಬಹುದು.

೧೦ ನೆಯ ಶತಮಾನದಲ್ಲಿ ಆರ್ಯರು ದಕ್ಷಿಣ ದೇಶದಲ್ಲಿ ನೆಲಸುವುದಕ್ಕೆ ಮೊದಲು ದ್ರಾವಿಡರು ಸಣ್ಣ ಸಣ್ಣ ಕವನಗಳನ್ನು ಕಟ್ಟಿ ಹಾಡಿದ್ದುಂಟು. ಕ್ರಮೇಣ ವಿದ್ಯಾವಂತರ ಮತಗ್ರಂಥಗಳು, ವ್ಯಾಖ್ಯಾನಗಳೂ ಪ್ರಚಾರಕ್ಕೆ ಬಂದವು. ಮಹಿಳೆಯರಲ್ಲಿ ಈ ದ್ರಾವಿಡ ಛಂದಸ್ಸಿನ ಕವಿತ್ವಗಳು ಕ್ರಮೇಣ ಉತ್ತಮ ಗ್ರಂಥಗಳಾದವು ಜೈನರು ನಂತರ ವೀರಶೈವರು ಸ್ವದೇಶದ ಕನ್ನಡದ ಹಾಡುಗಳ ಛಂದಸ್ಸನ್ನೇ ಬಲಪಡಿಸಿ ಹೊಸ ಹೊಸ ಕಾವ್ಯಗಳನ್ನು ಸೃಷ್ಟಿಸಿದರು.

### ಪ್ರಗಾಥಗಳು

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಬಿ.ಎಂ.ಶ್ರೀ.ಯವರ ಕಾಲದಲ್ಲಿ ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದರು. ಅದರ ಆಡಳಿತದ ಸಾಧನೆಗಳು, ಸುಧಾರಣೆಗಳು ಜನರ ಮನ್ನಣೆಗೆ ಪಾತ್ರವಾಗಿದ್ದವು. ಪ್ರಜೆಗಳ ಕ್ಷೇಮ, ಸೌಖ್ಯವೇ ಮುಖ್ಯವೆಂದು ನಂಬಿದ್ದರು. ಮಹಾತ್ಮ ಗಾಂಧೀಜಿ ಅವರನ್ನು 'ರಾಜಋಷಿ' ಎಂದು ಕರೆದು ಮೈಸೂರು ರಾಜ್ಯವನ್ನು 'ರಾಮರಾಜ್ಯ' ವೆಂದು ಪ್ರಶಂಸಿಸಿದ್ದರು. ಅವರಲ್ಲಿ ಅಪಾರ ಭಕ್ತಿ, ಗೌರವಗಳಿದ್ದ ಬಿ.ಎಂ.ಶ್ರೀ. ರಾಜಮನೆತನ ಕುರಿತು ನಾಲ್ಕು ಕವನಗಳಾದ ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ, ಬಾನ್‌ಕೊಂಡ ಕೃಷ್ಣನ್, ಶ್ರೀಯ ಜಯನ ಬೆಳಕು, ಅರಮನೆಯ ಒಸಗೆ ಕವನಗಳನ್ನು ರಚಿಸಿದರು. ಹಿಂದೆಂದೂ ಇರದಿದ್ದ ಈ ಕಾವ್ಯಗಳ ಹೊಸರೂಪಕ್ಕೆ 'ಪ್ರಗಾಥ' ಎನ್ನುವ ಹೆಸರನ್ನಿಟ್ಟರು.

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ರಜತ ಮಹೋತ್ಸವ ಸಂದರ್ಭದಲ್ಲಿ ಅವರು ಜುಲೈನಲ್ಲಿ ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ ಬರೆಯುವುದರ ಮೂಲಕ ಇಂಗ್ಲಿಷ್‌ನ 'ಓಡ್' ಎಂಬ ಕವನ ರೂಪವನ್ನು 'ಬಾನ್‌ಕೊಂಡ ಕೃಷ್ಣನ್' ಕವನದ ಮೂಲಕ ಇಂಗ್ಲಿಷ್‌ನ 'ಎಲಿಜಿ' ರೂಪವನ್ನು ಕನ್ನಡಕ್ಕೆ ತಂದರು. ಶೋಕಗೀತೆ ಮತ್ತು 'ಶ್ರೀ ಜಯನ ಬೆಳಕು ಕವನಗಳು ಕನ್ನಡ ಸಾಹಿತ್ಯಕ್ಕೆ ಬಿ.ಎಂ.ಶ್ರೀಯವರ ಹೊಸಬಗೆಯ ಕೊಡುಗೆಗಳು.

## ೮. ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ

ಬಿ.ಎಂ.ಶ್ರೀ. ಯವರ ಭಾಷಣಗಳು, ಮುನ್ನುಡಿಗಳು, ಪುಸ್ತಕಾವ ಲೋಕನಗಳನ್ನೊಳಗೊಂಡಿರುವ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಕೃತಿಯಲ್ಲಿ ಪ್ರಕಟವಾಗಿದ್ದರೂ ಅದರಲ್ಲಿ ಅವರ ಎಲ್ಲಾ ಭಾಷಣಗಳು, ಮುನ್ನುಡಿಗಳು ಪ್ರಕಟವಾಗಿಲ್ಲ. ಈ ಕೃತಿಯ ೧, ೨, ೩ ಭಾಗಗಳಿರುವ ಮೊದಲನೆಯ ಮುದ್ರಣ ೧೯೪೮ ರಲ್ಲಿ 'ಕನ್ನಡ ಕಾವ್ಯಮಾಲೆ' ಪ್ರಕಟಿಸಿತು. ಆ ಕೃತಿಯ ಮರುಮುದ್ರಣವನ್ನು ಮೈಸೂರಿನ ಕಾವ್ಯಾಲಯ ೧೯೫೧, ೧೯೬೨ ಮತ್ತು ೧೯೭೦ ರಲ್ಲಿ ಮಾಡಿತು. ಈ ಕೃತಿ ಕನ್ನಡ ಛಂದಸ್ಸಿನ ಮತ್ತು ಸಾಹಿತ್ಯದ ಚರಿತ್ರೆಗಳಿಗಿಂತ ಬಹಳ ಮುಖ್ಯವಾದದ್ದಾಗಿದೆ.

'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಕೃತಿಯಲ್ಲಿರುವ ಭಾಷಣಗಳ, ಲೇಖನಗಳ ಭಾಷೆ ತುಂಬ ಸರಳವಾಗಿದೆ. ವಿದ್ಯಾವಂತ ಆಧುನಿಕ ಕನ್ನಡಿಗರು ಸಾಮಾನ್ಯವಾಗಿ ಬಳಸುವ ಕನ್ನಡ ಭಾಷೆಯಲ್ಲಿದೆ. ಹಳೆಗನ್ನಡ, ನಡುಗನ್ನಡ, ಸಾಹಿತ್ಯದಿಂದ ಎತ್ತಿ ಅನುವಾದಿಸಿದ ಪಂಕ್ತಿಗಳು, ಬೈಬಲ್ ಹಾಗೂ ಇಂಗ್ಲಿಷ್ ಸಾಹಿತ್ಯದಿಂದ ತೆಗೆದು ಅನುವಾದಿಸಿದ ವಾಕ್ಯಗಳಿವೆ. ಭಾಷಣಗಳಲ್ಲಿ ಅವರಿಗಿದ್ದ ನಾಡು ನುಡಿ ಮತ್ತು ದೇಶಪ್ರೇಮ ವ್ಯಕ್ತವಾಗುತ್ತದೆ.

ಈ ಕೃತಿಯಲ್ಲಿರುವ ಕೆಲವು ಭಾಷಣಗಳು ಕೆಳಕಂಡ ವಿಷಯಗಳನ್ನು ಕುರಿತದ್ದಾಗಿದೆ.

- ಕನ್ನಡ ಮಾತು ತಲೆಯೆತ್ತುವ ಬಗೆ (ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ಸಭೆಯಲ್ಲಿ ಮಾಡಿದ ಉಪನ್ಯಾಸ (ಡಿಸೆಂಬರ್ ೧೯೧೧).
- ಕನ್ನಡಕ್ಕೆ ಒಂದು ಕಟ್ಟು-೧. ಸಾಮಾನ್ಯ ವಿಧಿಗಳು ೨. ಶಬ್ದ ಕೋಶ, ೩. ವ್ಯಾಕರಣ.
- ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ (ಕಲ್ಬುರ್ಗಿಯಲ್ಲಿ ನಡೆದ ಕರ್ನಾಟಕ ಸಾಹಿತ್ಯ ಪರಿಷತ್ತಿನ ೧೪ ನೇ ಸಮ್ಮೇಳನದಲ್ಲಿ ಅಧ್ಯಕ್ಷರ ಆರಂಭ ಭಾಷಣ. (೧-೬-೧೯೨೮)
- ದಿವ್ಯ ಮಂತ್ರ (ಮೈಸೂರಿನಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತಿನ ೧೯ ನೇ ಸಮ್ಮೇಳನದಲ್ಲಿ ಮಾಡಿದ ಸ್ವಾಗತ ಭಾಷಣ. (೫-೧೦-೧೯೩೦).
- 'ಕನ್ನಡದ ಪುನರುಜ್ಜೀವನ'-ಮಾತೃಭಾಷೆ, ದೇಶ ಭಾಷೆ, ರಾಜ ಭಾಷೆ, ರಾಷ್ಟ್ರಭಾಷೆ, ಭಾಷೆಯ ಮಹತ್ವ, ದೇವಭಾಷೆ, ಹೂಣ ಭಾಷೆ, ಭಾಷೆಗಳ ಮೇಲಾಟ, ಕನ್ನಡ ನಾಡಿಗೆ ಕನ್ನಡವೇ ಗತಿ. ತಿಳಿಗನ್ನಡ ತಿರುಳ್ಗನ್ನಡ.

- 'ಕನ್ನಡದ ಸಾರಮಂತ್ರ'-ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ೨೬-೪-೧೯೩೫ ಮಾಡಿದ ಉಪನ್ಯಾಸ ಸಾರಾಂಶ.
- 'ಕನ್ನಡ ಹಬ್ಬ'-ಮೈಸೂರಿನಲ್ಲಿ ನಡೆದ 'ಕನ್ನಡ ಉತ್ಸವ' ದ ಅಧ್ಯಕ್ಷ ಸ್ಥಾನದಿಂದ ೧೪-೧೨-೩೭ಮಾಡಿದ ಭಾಷಣ.
- 'ಪರಿಷತ್ತಿನ ಧ್ಯೇಯ, ಬಿನ್ನಹ,ತಾಯಿಯ ಕೈಂಕರ್ಯಕ್ಕೆ ನಿಲ್ಲಿ' (ಬೆಂಗಳೂರು-೨೬-೧-೧೯೩೫)
- ಪರಿಷತ್ತಿನ ಗುರಿಗಳು-ಪರಿಷತ್ತು ಕನ್ನಡ ಮಹಾಜನರ ವಿಶ್ವವಿದ್ಯಾ ನಿಲಯವಾಗಬೇಕು. ಪರಿಷನ್ಮಂದಿರದಲ್ಲಿ ೨೭-೨-೧೯೩೮ ದಿವಾನರಾಗಿದ್ದ ಸರ್. ಮಿರ್ಜಾ ಎಂ. ಇಸ್ಮಾಯಿಲ್‌ರ ಗೌರವಾರ್ಥವಾಗಿ ನಡೆದ ಸಮಾರಂಭದಲ್ಲಿ ಮಾಡಿದ ಸ್ವಾಗತ ಭಾಷಣ.
- ಐದನೆಯ ವಸಂತ ಸಾಹಿತ್ಯೋತ್ಸವ-ಪರಿಷತ್ತಿನ ದೊಡ್ಡ ಗುರಿ, ಮಹಾ ಪ್ರಭುಗಳ ಆಶ್ರಯ-ಶ್ರೀ ಶಾಮರಾಯರವರ ಉಪಕಾರ ಅರಮನೆ ಗುರುಮನೆಗಳ ಬೆಂಬಲ-ಹಿಂದಿನ ಹಿರಿಯರ ಸೇವೆ. ಪರಿಷತ್ತಿನ ಮೂರು ಸಮಾರಂಭಗಳು, ಪ್ರಚಾರ ಕಾರ್ಯ ಪರಿಷತ್ತಿನ ಹೊಸ ಪ್ರಕಟಣೆ- ಪರಿಷತ್ತಿಗೆ ಎಲ್ಲರೂ ಬೇಕು. ಕನ್ನಡ ಸಾಹಿತ್ಯ ಪರೀಕ್ಷೆಗಳು-ಪರಿಷತ್ತಿಗೊಂದು ಅಚ್ಚುಕೂಟ (ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಐದನೆಯ ವಸಂತ ಸಾಹಿತ್ಯೋತ್ಸವ ಸಂದರ್ಭದಲ್ಲಿ ಮಾಡಿದ ಸ್ವಾಗತ ಭಾಷಣ. (ಏಪ್ರಿಲ್, ಮೇ, ೧೯೩೮)
- ಕನ್ನಡ ಅಕ್ಷರ ಸಂಸ್ಕರಣ-'ಅತಿ ಸರ್ವತ್ರ ವಜ್ರಯೇತ್' (ಮೈಸೂರಿನಲ್ಲಿ ನಡೆದ ಜೈನ ಮಹಾ ಸಮ್ಮೇಳನದಲ್ಲಿ ಮಾಡಿದ ಪ್ರಾರಂಭೋತ್ಸವದ ಭಾಷಣ-೨೩-೧೦-೧೯೩೯.
- 'ನನ್ನ ಜೀವದುಸಿರು' (ಮೈಸೂರಿನಲ್ಲಿ ನಡೆದ ಜೈನ ಮಹಾ ಸಮ್ಮೇಳನದ ಸದಸ್ಯರು ದಯಪಾಲಿಸಿದ ಅಭಿನಂದನ ಪತ್ರಿಕೆಗೆ ಉತ್ತರ)೨೩-೧೦-೩೯
- ಶ್ರೀಮಾನ್ ಕೌಜಲಗಿ ಶ್ರೀನಿವಾಸರಾಯರು-೧-೩-೧೯೪೦.
- ಪೂರ್ವದ ಹಳೆಗನ್ನಡ ಮತ್ತು ತಮಿಳು, ಕನ್ನಡ ಮೊದಲೊ ತಮಿಳು ಮೊದಲೊ ಕುರಿತ ಭಾಷಣ.
- ನಮ್ಮ ಕುಲ ಕನ್ನಡ ಕುಲ-ಎಮ್ಮಿಗನೂರಿನಲ್ಲಿ ೧೯೪೦ರ ಏಪ್ರಿಲ್‌ನಲ್ಲಿ ನಡೆದ ಕರ್ನಾಟಕ ಸಂಘದ ಪ್ರಾರಂಭೋತ್ಸವ ಭಾಷಣ.
- ರುದ್ರನಾಟಕ-ಮೈಸೂರು ಪ್ರಾಂತ ಸಮಿತಿಯ ಆಶ್ರಯದಲ್ಲಿ ಮಾಡಿದ ಪ್ರಾರಂಭ ಭಾಷಣ ೧-೨-೧೯೪೧.

- ಭಗವಾನ್ ಬುದ್ಧ –ಮೈಸೂರಿನ ಪರಿಷನ್ಮಂದಿರದಲ್ಲಿ ಧರ್ಮ ಪ್ರವರ್ತಕರ ಉತ್ಸವ ನಡೆದ ಸಂದರ್ಭದಲ್ಲಿ ಮಾಡಿದ ಭಾಷಣ ೨೯–೬–೪೧.
- ಸರ್ ಎಂ.ವಿಶ್ವೇಶ್ವರಯ್ಯನವರು–ಸರ್ ಎಂ.ವಿ.ಯವರ ೮೧ ನೆಯ ವರ್ಧಂತಿ ಪರಿಷತ್ತಿನ ಆಶ್ರಯದಲ್ಲಿ ನಡೆದಾಗ ಮಾಡಿದ ಭಾಷಣ ೧೫–೯–೧೯೪೧.
- ನನ್ನ ಜೀವ ಮಂತ್ರ–ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ೧೪–೯–೧೯೪೧ ಶ್ರೀಯವರ ೫೭ನೇ ಹುಟ್ಟಿದ ಹಬ್ಬ ಆಚರಿಸಿ 'ಸಂಭಾವನೆ' ಯನ್ನು ಒಪ್ಪಿಸಿದಾಗ ಮಾಡಿದ ಭಾಷಣ.

**ಮುನ್ನುಡಿಗಳು :**

- ಮೈಸೂರು ವಿಶ್ವವಿದ್ಯಾನಿಲಯದ ಸಂಘ ಪ್ರಕಟಿಸಿದ 'ರನ್ನಕವಿ ಪ್ರಶಸ್ತಿ' ಗೆ ಬರೆದ ಮುನ್ನುಡಿ – ೧೯೨೮
- ಕನ್ನಡ ಗ್ರಂಥ ಮಾಲೆಗೆ ಬರೆದ ಮುನ್ನುಡಿ–೧೯೩೧
- 'ಅಭಿನವ ಪಂಪ' ಗ್ರಂಥಕ್ಕೆ ಬರೆದ ಮುನ್ನುಡಿ – ೧೯೩೪
- ಜನಪದ ಸಾಹಿತ್ಯ–'ಗರತಿಯ ಹಾಡು' ಸಂಗ್ರಹಕ್ಕೆ ಬರೆದ ಪ್ರಸ್ತಾವನೆ ಜುಲೈ ೧೯೩೬.
- 'ರವೀಂದ್ರನಾಥ ಠಾಕೂರರು–ಎನ್.ಜಿ. ಶಾಸ್ತ್ರಿಗಳಿಂದ ರಚಿತವಾದ Doll's House ನಾಟಕದ ಕನ್ನಡದ ಅನುವಾದಕ್ಕೆ ಬರೆದ ಮುನ್ನುಡಿ–೧೯೩೬
- 'ಸಂಸ್ಕೃತ ನಾಟಕ' ಗ್ರಂಥಕ್ಕೆ ಬರೆದ ಮುನ್ನುಡಿ – ೧೯೩೭
- 'ಆರು ಕಥೆಗಳು' ಪುಸ್ತಕಕ್ಕೆ ಬರೆದ ಮುನ್ನುಡಿ–೧೯೩೭
- ಕುಮಾರವ್ಯಾಸ ಪ್ರಶಸ್ತಿಗೆ ಬರೆದ ಮುನ್ನುಡಿ–೧೯೪೦
- ಹೊನ್ನಮ್ಮನ 'ಹದಿಬದೆಯ ಧರ್ಮ'ಕ್ಕೆ ಬರೆದ ಮುನ್ನುಡಿ–೧೯೪೦
- 'ಆದಿಕವಿ ಪಂಪ' ಕ್ಕೆ ಬರೆದ ಮುನ್ನುಡಿ–೨೩–೧೦–೧೯೪೧
- 'ಗ್ರೀಕರ ತತ್ತ್ವಶಾಸ್ತ್ರ' ಸಂಗ್ರಹಕ್ಕೆ ಬರೆದ ಮುನ್ನುಡಿ–೧೯೪೧
- ವಚನ ಧರ್ಮಶಾಸ್ತ್ರಕ್ಕೆ ಬರೆದ ಮುನ್ನುಡಿ–೧೯೪೨
- ತಮಿಳಿನ 'ಹೊಯ್ಸಳರು' ಕೃತಿಗೆ ಬರೆದ ಮುನ್ನುಡಿ–೧೯೪೩
- ಎಲ್. ಗುಂಡಪ್ಪನವರು ಸಂಪಾದಿಸಿದ 'ನಾಡ ಪದಗಳು' ಪುಸ್ತಕಕ್ಕೆ ಬರೆದ ಮುನ್ನುಡಿ–೧೯೪೬
- ಸಾಕ್ರಟೀಸ್ ತಮಿಳು ಪುಸ್ತಕದ ಕನ್ನಡ ಅನುವಾದ ಗ್ರಂಥಕ್ಕೆ ಬರೆವ ಮುನ್ನುಡಿ–೧೯೪೧
- ಕಾವ್ಯಾವಲೋಕನಂ–ಮೈಸೂರು ವಿಶ್ವವಿದ್ಯಾನಿಲಯದ ಓರಿಯಂಟಲ್ ಲೈಬ್ರರಿಯ ಎರಡನೆಯ ಮುದ್ರಣಕ್ಕೆ ಬರೆದ ಮುನ್ನುಡಿ–೧೯೪೦

- ಎನ್.ಸಿ. ಅಣ್ಣಯ್ಯನವರ 'ಗುಡಿಸಿಲ ಗುರು' ಪುಸ್ತಕಕ್ಕೆ ಬರೆದ ಮುನ್ನುಡಿ-೧೯೪೫. ಧಾರವಾಡ.
- ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷ ಪದವಿಯಿಂದ ಬಿಡುಗಡೆಯಾದಾಗ ಬರೆದ ಮುನ್ನುಡಿ-೨೧-೧೨-೧೯೪೨
- ಶ್ರೀಮಾನ್ ವೆಂಕಣ್ಣಯ್ಯನವರು ಪ್ರಬುದ್ಧ ಕರ್ನಾಟಕ - ೨೦-೪-೧೯೩೯
- ಶ್ರೀಮಾನ್ ವೆಂಕಣ್ಣಯ್ಯನವರು-ಪ್ರಬುದ್ಧ ಕರ್ನಾಟಕ ೨೦-೪-೧೯೩೯

ಮತ್ತಿತರ ಮುನ್ನುಡಿಗಳು.

## ೯. ಇಸ್ಲಾಂ ಸಂಸ್ಕೃತಿ

ಪ್ರೊಫೆಸರ್ ಮಹಮ್ಮದ್ ಅಬ್ಬಾಸ್ ಘೂಸ್ತಿಯವರು ರಚಿಸಿದ 'ಇಸ್ಲಾಂ ಸಂಸ್ಕೃತಿ' ಎನ್ನುವ ಗ್ರಂಥವನ್ನು ಬಿ.ಎಂ.ಶ್ರೀ ಕನ್ನಡ ಭಾಷೆಗೆ ಅನುವಾದಿಸಿದ್ದಾರೆ. ಆ ಗ್ರಂಥವನ್ನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ೧೯೪೮ ರಲ್ಲಿ (ಬಿ.ಎಂ.ಶ್ರೀ ಯವರ ನಿಧನದ ನಂತರ) ಪ್ರಕಟಿಸಿತು. ಈ ಕೃತಿಯ ಪ್ರಧಾನ ಸಂಪಾದಕರು ಕೆ.ವಿ.ಪುಟ್ಟಪ್ಪನವರು. ಅವರೇ ಈ ಕೃತಿಗೆ ಮುನ್ನುಡಿ ಬರೆದಿದ್ದಾರೆ.

**ಈ ಕೃತಿಯಲ್ಲಿ ಕೆಳಕಂಡ ವಿಷಯಗಳನ್ನು ಕುರಿತ ಲೇಖನಗಳಿವೆ.**

- ಪೈಗಂಬರ್ ಮಹಮ್ಮದ್-ಜೀವನ ಮತ್ತು ತತ್ತೋಪದೇಶ.
- ಇಸ್ಲಾಂ ಹರಡಿಕೆ ಮತ್ತು ಇಸ್ಲಾಂ ದೇಶಗಳು
- ಮುಸ್ಲಿಂ ಮತಭೇದಗಳು
- ಇಸ್ಲಾಂ ರಾಜಕೀಯ ಚರಿತ್ರೆ,
- ಮುಸ್ಲಿಂ ಸಾಹಿತ್ಯ ಚರಿತ್ರೆ,
- ಶಾಸ್ತ್ರ, ಕಲೆ, ವಿದ್ಯಾಭ್ಯಾಸ
- ಮುಸ್ಲಿಂ ವಾಣಿಜ್ಯ
- ಮುಸ್ಲಿಂ ಕಲಾ ಸಂಸ್ಕೃತಿ
- ಮುಸ್ಲಿಮರ ಇತರ ಕಲೆಗಳು
- ಮುಸ್ಲಿಂ ದರ್ಶನ ಚರಿತ್ರೆ
- ಸಂಘ ಧರ್ಮದ ಚರಿತ್ರೆ
- ಮುಸ್ಲಿಂ ಅಲ್‌ಕಲಾಮ್ ಅಥವಾ ವ್ಯಾಖ್ಯಾನ ಮತ
- ಮುಸ್ಲಿಂ ದೇವತಾಶಾಸ್ತ್ರ ಮತ್ತು ನ್ಯಾಯ ಶಾಸ್ತ್ರ
- ಮುಸ್ಲಿಂ ಸಮಾಜತತ್ತ್ವ
- ೧೯೭೦ ರಲ್ಲಿ ಈ ಗ್ರಂಥವನ್ನು ಮೈಸೂರು ವಿಶ್ವವಿದ್ಯಾನಿಲಯ ಮರು ಮುದ್ರಣ ಮಾಡಿದೆ.

ಭಾಗ-೪

# ಬಿ.ಎಂ.ಶ್ರೀ : ಸಂಸ್ಥೆಗಳ ಒಡನಾಟ
# ೧. ಕನ್ನಡ ಸಾಹಿತ್ಯ ಪರಿಷತ್ತು.

ಇಡೀ ಭಾರತದ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ 'ಕನ್ನಡ ಸಾಹಿತ್ಯ ಪರಿಷತ್ತು ಒಂದು ಹಿರಿಯ ಸಂಸ್ಥೆಯಾಗಿದೆ. ಕರ್ನಾಟಕದ ರಾಜಧಾನಿಯಾಗಿರುವ ಬೆಂಗಳೂರು ನಗರದ ಚಾಮರಾಜಪೇಟೆಯ ಬಡಾವಣೆಯ ಪಂಪಮಹಾಕವಿ ರಸ್ತೆಯಲ್ಲಿರುವ ಈ ಸಂಸ್ಥೆ ಪುಸ್ತಕಗಳ ಪ್ರಕಟಣೆ, ಸಂಶೋಧನೆಗಳು, ಸಾಹಿತ್ಯ ಸಮ್ಮೇಳನಗಳು ಹಾಗೂ ಸಾಹಿತ್ಯ ಸ್ಪರ್ಧೆಗಳಿಗೆ ಮೀಸಲಾಗಿದೆ. ಭಾಷೆ, ಸಾಹಿತ್ಯದ ಬೆಳವಣಿಗೆ ಇದರ ಗುರಿಯಾಗಿದೆ.

೧೯೧೫ ನೇ ಇಸವಿ ಮೇ ೩ ನೇ ತಾರೀಖು ಮೈಸೂರು ಸಂಸ್ಥಾನದ ದಿವಾನರಾಗಿದ್ದ ಮೋಕ್ಷಗುಂಡಂ ವಿಶ್ವೇಶ್ವರಯ್ಯ ಹೆಚ್.ವಿ.ನಂಜುಂಡಯ್ಯನವರ ಅಧ್ಯಕ್ಷತೆ ಹಾಗೂ ಮಾರ್ಗದರ್ಶನದಲ್ಲಿ 'ಕನ್ನಡ ಸಮಿತಿ' ಎನ್ನುವ ಸಂಸ್ಥೆಯನ್ನು ಹುಟ್ಟು ಹಾಕಿದರು. ಈ ಸಂಸ್ಥೆ ೧೯೩೫ ರಲ್ಲಿ 'ಕನ್ನಡ ಸಾಹಿತ್ಯ ಪರಿಷತ್ತು' ಎನ್ನುವ ಹೆಸರು ಪಡೆಯಿತು. ೧೯೩೮ ರಲ್ಲಿ ಮೇ ೨೯ ನೇ ದಿನಾಂಕ ಸ್ವಂತ ಕಟ್ಟಡವನ್ನು ಹೊಂದಿತು.

ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪಂಡಿತರಾಗಿದ್ದು ಹಲವಾರು ಭಾಷೆಗಳ ಪರಿಚಯವಿದ್ದ ಬಿ.ಎಂ.ಶ್ರೀ. ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದು ಹಲವಾರು ಪ್ರಬುದ್ಧ ಉಪನ್ಯಾಸಗಳ ಮೂಲಕ ನಾಡಿನ ಗಮನ ಸೆಳೆದಿದ್ದರು. ಜಮಖಂಡಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ನಂತರ ೧-೧-೧೯೩೮ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದರು. ಆ ಸಂದರ್ಭದಲ್ಲಿ ಅವರು ಹೇಳಿದ ಮಾತುಗಳಿವು.

"ನನ್ನ ಹಿರಿಯರು ಅನೇಕರು ಈ ಕನ್ನಡದ ಪಂಜನ್ನು ಹೊತ್ತಿಸಿ ಕಾಪಾಡಿಕೊಂಡು ಬಂದು, ಅದನ್ನು ಈಗ ನನ್ನ ಕೈಗೆ ಕೊಟ್ಟಿದ್ದಾರೆ. ತಾಯಿಗೆ

ಸೇವೆ ಸಲ್ಲಿಸುವುದಕ್ಕೆ ಈ ಒಬ್ಬನ ದುಡಿಮೆ ಸಾಕೆ? ನಮ್ಮ ಹಿರಿಯರು ತೋರಿಸಿದ ದಾರಿಯಲ್ಲಿಯೇ ಹೋಗಿ, ನಮ್ಮ ಯೋಚನೆ, ಶಕ್ತಿ, ಮನೋಭಾವ ಇವುಗಳನ್ನೂ ಅವರೊಂದಿಗೆ ಸೇರಿಸಿಕೊಂಡು ಹೋಗುವುದಾದರೆ ಏನು ತಾನೇ ಮಾಡಲಾಗದು? ನಮ್ಮಲ್ಲಿ ಶಕ್ತಿ ಇಲ್ಲವೆ? ಮೇಧಾವಿಗಳಿಲ್ಲವೆ? ನಮ್ಮ ನಾಡನ್ನು ಎತ್ತುವುದರಲ್ಲಿ ನೆರವಾಗುವಂಥ ಪುಣ್ಯಾತ್ಮರಿಲ್ಲವೆ? ಕನ್ನಡ ನಾಡಿನ ಕೆಲಸಕ್ಕೆ, ಕನ್ನಡ ಜನರ ಕೆಲಸಕ್ಕೆ, ಎಷ್ಟು ಮಂದಿ, ಎಷ್ಟು ಹಣ ಸೇರಿದರೂ ಸಾಲದು. ಕನ್ನಡ ನಾಡಿನಲ್ಲಿ ಹೆಂಗಸರು, ಮಕ್ಕಳು, ಒಕ್ಕಲಿಗರು, ಹಳ್ಳಿಯವರು, ಸರ್ವರೂ – ಯಾರೊಬ್ಬರೇ ಆಗಲಿ, ಯಾವ ಒಂದು ಅಜ್ಞಾನಾಂಧಕಾರದಲ್ಲಿ ಮುಳುಗಿದ್ದಾರೆಯೊ ಅವರನ್ನೆಲ್ಲಾ ಮೇಲಕ್ಕೆತ್ತಿ, ಸ್ಫೂರ್ತಿಗೊಳಿಸಿ, ಆತ್ಮ ಬೆಳಗಿಸಿ, ಅವರಿಗೆ ಯಾವ ಒಂದು ಧೈರ್ಯ, ಯಾವ ಒಂದು ಕೆಚ್ಚು ಬೇಕೋ ಅದನ್ನು ಹೊಮ್ಮಿಸಿ, ಚಿಮ್ಮಿಸಿ, ಈ ಹೊಸ ಪ್ರಕರಣದಲ್ಲಿ ಅವರು ತಲೆಯೆತ್ತಿ ಬಾಳುವ ಹಾಗೆ ಮಾಡಬೇಕಾದರೆ ಕನ್ನಡ ನುಡಿಗೆ, ಕನ್ನಡ ಜನಕ್ಕೆ, ಕನ್ನಡಿಗರಲ್ಲಿ ಆದ್ಯರಾದವರು ಉದಾರ ಮನಸ್ಸಿನಿಂದ ಬೆಂಬಲವಾಗಿ ನಿಲ್ಲಬೇಕು."

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷತೆಯ ಪದವಿಗೆ ಭೂಷಣ ಪ್ರಾಯರಾಗಿದ್ದ ಬಿ.ಎಂ.ಶ್ರೀ. ಸಾರಿದ ಪರಿಷತ್ತಿನ ಗುರಿಗಳು ಕೆಳಕಂಡತಿವೆ:–

"ಕನ್ನಡವನ್ನು ಬೆಳೆಸಿ, ಕನ್ನಡ ನಾಡಿನಲ್ಲೆಲ್ಲಾ ಒಂದು ರೂಪಕ್ಕೆ ತಂದು, ಅದರ ಮೂಲಕ ಕನ್ನಡಿಗರನ್ನೆಲ್ಲಾ ಒಂದುಗೂಡಿಸುವುದು.

ಈ ಹೊಸ ಕಾಲದಲ್ಲಿ ಕನ್ನಡಿಗರಿಗೆ ಬೇಕಾದ ತಿಳುವಳಿಕೆಯನ್ನೆಲ್ಲಾ ಕೊಟ್ಟು, ಕನ್ನಡ ನಾಡಿನ ಮುನ್ನಡೆಗಾಗಿ ಕೆಲಸಮಾಡುವುದು.

ಹಳೆಯ ಸಾಹಿತ್ಯದ ಪ್ರಚಾರ, ಹೊಸ ಸಾಹಿತ್ಯದ ಪೋಷಣೆ, ವ್ಯಾಸಂಗ ಗೋಷ್ಠಿ, ಪರೀಕ್ಷೆ, ವಿಮರ್ಶೆ, ಪರಿಶೋಧನೆ;

ಸಮ್ಮೇಳನ, ವಸಂತೋತ್ಸವ, ಉಪನ್ಯಾಸ, ನಾಟಕ, ಗಮಕಕಲೆ, ಜನ ಸಂಸ್ಕೃತಿ, ವಿನೋದ, ಸ್ಪರ್ಧೆ, ಮಕ್ಕಳ ನಲಿವು;

ಕನ್ನಡ ಸಂಘಗಳ ಒಕ್ಕೂಟ ಮತ್ತು ಕೈವಾಡದಿಂದ ಊರೂರು, ಹಳ್ಳಿಹಳ್ಳಿಗಳಲ್ಲಿ ಬೆಳಕು, ಹುರುಪು, ಹೊಸಬಾಳು, ಹಬ್ಬ;

ಒಂದು ಮಾತಿನಲ್ಲಿ ಕನ್ನಡಿಗರ ಪುನರುಜ್ಜೀವನ. ಒಟ್ಟಿನಲ್ಲಿ ಪರಿಷತ್ತು ಕನ್ನಡಿಗರ ಸಾರ್ವಜನಿಕ ವಿದ್ಯಾಪೀಠ. 'ಪರಿಷತ್ತು ನಮ್ಮದು, ಎಲ್ಲಾ ಕನ್ನಡಿಗರದು. ಅರಮನೆ, ಗುರುಮನೆಗಳ ಆಶ್ರಯದಲ್ಲಿ ಜನರ ಬೆಂಬಲದಿಂದ ಮುಂದಡಿಯಿಟ್ಟು

ಸೇವೆ ಮಾಡಲು ಸಹಾಯ ಮಾಡಿ ಎಂದು ಪರಿಷತ್ತಿನ ಪರವಾಗಿ ಬೇಡುತ್ತೇನೆ' ಎಂದು ಅವರು ಮನವಿ ಮಾಡಿಕೊಂಡರು.

ಕನ್ನಡ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳು ನಾಡಿನಾದ್ಯಂತ ವಿಸ್ತರಿಸಬೇಕೆಂದು ಬಿ.ಎಂ.ಶ್ರೀ. ೧೯೩೭ ರಲ್ಲಿ ಮೈಸೂರು, ಉತ್ತರ ಕರ್ನಾಟಕ, ಮಂಗಳೂರು, ಕೊಡಗು ಮತ್ತು ಹೈದರಾಬಾದಿನಲ್ಲಿ ನಾಲ್ಕು ಪ್ರಾಂತ ಸಮಿತಿಗಳನ್ನು ರಚಿಸಿದರು. ಈ ಸಮಿತಿಗಳ ಹಣದ ವ್ಯವಸ್ಥೆಗಾಗಿ ಹಿಂದಿನ ಮೂರು ತಿಂಗಳ ಅವಧಿಯಲ್ಲಿ ಆಯಾ ಸ್ಥಳದ ಸದಸ್ಯರಿಂದ ವಸೂಲಾದ ವಾರ್ಷಿಕ ಚಂದಾ ಹಣದ ಮೂರರಲ್ಲೊಂದು ಭಾಗವನ್ನು ಮೂರು ತಿಂಗಳಿಗೊಮ್ಮೆ ಪ್ರಾಂತ ಸಮಿತಿಗಳಿಗೆ ಸಲ್ಲಿಸತಕ್ಕದೆಂದು ತೀರ್ಮಾನಿಸಲಾಯಿತು. ಈ ಸಮಿತಿಗಳ ನೆರವಿನಿಂದ ಬೆಂಗಳೂರು, ಉಡುಪಿ, ಬಾರಕೂರು. ಗೋಕರ್ಣ, ಕೊಳ್ಳೇಗಾಲ ಮೊದಲಾದ ಕಡೆಗಳಲ್ಲಿ ವಸಂತ ಸಾಹಿತ್ಯೋತ್ಸವವನ್ನು ನಡೆಸಲಾಯಿತು.. ಹುಬ್ಬಳ್ಳಿ, ಅಥಣಿ ಮೊದಲಾದ ಸ್ಥಳಗಳಲ್ಲಿ ಜಿಲ್ಲಾ ಸಾಹಿತ್ಯ ಸಮ್ಮೇಳನಗಳಾದವು. ಕಾಲ ಕ್ರಮೇಣ ಹಣದ ಅಭಾವದಿಂದ ಪ್ರಾಂತ ಸಮಿತಿಗಳ ಯೋಜನೆ ಯಶಸ್ವಿಯಾಗಲಿಲ್ಲ.

ಬಿ.ಎಂ.ಶ್ರೀ. ಪರಿಷತ್ತಿನ ಉಪಾಧ್ಯಕ್ಷರಾಗಿ ನಾಡು ನುಡಿಯ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಹಮ್ಮಿಕೊಂಡರು. ಅವುಗಳಿಗೆ ಮೊದಲು ಸ್ಪಂಧಿಸಿದ ಸಂಸ್ಥೆಗಳೆಂದರೆ ಧಾರವಾಡದ 'ವಿದ್ಯಾವರ್ಧಕ ಸಂಘ' ಮತ್ತು ಬೆಂಗಳೂರಿನ 'ಅಖಿಲ ಕರ್ನಾಟಕ ಸಂಘ'. ಈ ಸಂಸ್ಥೆಗಳು ತಮ್ಮಲ್ಲಿದ್ದ ಬೇಧ ಭಾವಗಳನ್ನು, ಅಸಮಾನತೆಗಳನ್ನು ಮರೆತು ಅಣ್ಣ ತಮ್ಮಂದಿರಂತೆ ಪರಿಷತ್ತಿನ ಅಭಿವೃದ್ಧಿಗಾಗಿ ಶ್ರಮಿಸಿದವು.

ಅವರು ೧೯೩೮ ರಲ್ಲಿ ಪರಿಷತ್ತಿನ ವಿಶೇಷ ಕಾಣಿಕೆಯಾಗಿ 'ಕನ್ನಡ ಬಾವುಟ' ಎಂಬ ಕವನ ಸಂಕಲವನ್ನು ಸಂಪಾದಿಸಿ ಪ್ರಕಟಿಸಿದರು. 'ಈ ಸಂಕಲನದಲ್ಲಿ ಏಳನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನಗಳ ಕವಿಗಳಲ್ಲಿ ಕೆಲವರ ಕವನಗಳನ್ನು ಆಯ್ಕೆ ಮಾಡಲಾಗಿದೆ. 'ಎರಡು ಸಾವಿರ ವರ್ಷಗಳ ಕವನಗಳ ಜೀವಾಳವಿದೆ' ಎಂದು ಅವರೇ ಹೇಳಿದ್ದಾರೆ.

೧೯೩೮ ರಲ್ಲಿ ವಿಜಯದಶಮಿ ಹಬ್ಬದ ದಿನ ಪರಿಷತ್ತಿನಿಂದ 'ಕನ್ನಡ ನುಡಿ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಅದು ನಿಜಕ್ಕೂ ಅವರ ಮತ್ತೊಂದು ಸಾಧನೆ. ಯಾಕೆಂದರೆ ಪರಿಷತ್ತು ಸಾರ್ವಜನಿಕರು, ಸಾಮಾನ್ಯ ರೊಂದಿಗೆ ಸಂಪರ್ಕ ಬೆಳೆಸಲು ಪರಿಷತ್ಪತ್ರಿಕೆಯೊಂದರ ಅವಶ್ಯಕತೆಯಿತ್ತು.

ಅ.ನ.ಕೃಷ್ಣರಾಯರು ಪತ್ರಿಕೆಯ ಪ್ರಥಮ ಸಂಪಾದಕರು. ಎರಡನೆಯ ಸಂಪಾದಕರು ಬಿ.ವೆಂಕೋಬರಾವ್, ಮೂರನೆಯ ಸಂಪಾದಕರು ಬಿ.ಎಂ.ಶ್ರೀ.ಯವರು ೧೯೪೨ ಫೆಬ್ರವರಿಯಿಂದ ೧೯೪೨ ರ ಡಿಸೆಂಬರ್‌ರವರೆಗೆ ಪತ್ರಿಕೆಯ ಸಂಪಾದಕರಾಗಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿದರು.

'ಕನ್ನಡ ನುಡಿ' ೧೯೩೮ರಿಂದ ಕೆಲಕಾಲ ಪಕ್ಷಪತ್ರಿಕೆಯಾಗಿದ್ದು ೧೯೫೦ನೇ ಇಸವಿ ಆಗಸ್ಟ್ ತಿಂಗಳಿಂದ ಮಾಸಪತ್ರಿಕೆಯಾಯಿತು. ಆ ಪತ್ರಿಕೆ ಪರಿಷತ್ತಿನ ಕಾರ್ಯ ಕಲಾಪಗಳು, ಚಟುವಟಿಕೆಗಳನ್ನು ನೀಡುವುದರ ಮೂಲಕ ಪರಿಷತ್ತಿನ ಸದಸ್ಯರೊಡನೆ ಸಂಪರ್ಕವನ್ನಿಟ್ಟುಕೊಂಡಿತ್ತು. ಸದಸ್ಯರಲ್ಲಿ ಎರಡು ವರ್ಗಗಳಿತ್ತು. ವಾರ್ಷಿಕ ಚಂದ ಆರು ರೂಪಾಯಿ ಇಲ್ಲವೆ ಮೂರು ರೂಪಾಯಿ ಕೊಡುವ ಸದಸ್ಯರಿದ್ದು, ಆರು ರೂಪಾಯಿ ಕೊಡುವವರಿಗೆ 'ಕನ್ನಡ ನುಡಿ' ಪತ್ರಿಕೆಯನ್ನು, ಮೂರು ರೂಪಾಯಿ ನೀಡುವವರಿಗೆ 'ಸಂಗ್ರಹ' ಪ್ರತಿಯನ್ನು ನೀಡಲಾಗುತ್ತಿತ್ತು. 'ಕನ್ನಡ ನುಡಿ'ಯಲ್ಲಿ ಪರಿಷತ್ತಿನ ಚಟುವಟಿಕೆಗಳು ಸುದ್ದಿಗಳು, ಮುಖ್ಯ ಸಂಪಾದಕೀಯ ಟಿಪ್ಪಣಿಗಳು ಪ್ರಕಟವಾಗುತ್ತಿತ್ತು.

'ಕನ್ನಡ ನುಡಿ' ಪತ್ರಿಕೆಯ ಗುರಿ ಏನೆಂಬುದನ್ನು ಬಿ.ಎಂ.ಶ್ರೀ ಈ ರೀತಿ ಸ್ಪಷ್ಟಪಡಿಸಿದ್ದಾರೆ :-

"ಪರಿಷತ್ತಿನ ಈ ಪತ್ರಿಕೆ ಮೂರು ತಿಂಗಳಿಗೊಮ್ಮೆ ಸಾಹಿತ್ಯದ ವಿಚಾರಗಳನ್ನು, ಭಾಷಾ ಲಕ್ಷಣಗಳನ್ನು, ಸಂಶೋಧನೆಗಳನ್ನು ಹೆಚ್ಚಾಗಿ ಸಾಹಿತ್ಯದ ಪರಿಚಯವಿರುವವರ ಪ್ರಯೋಜನಕ್ಕೆ ಯೋಗ್ಯವಾಗಿದ್ದಾಗಿದೆ."

ಈ ಪತ್ರಿಕೆಯ ಪ್ರಥಮ ಸಂಚಿಕೆ ಫುಲ್ಸ್‌ಕ್ಯಾಪ್ ಆಕಾರದಲ್ಲಿ ಎಂಟು ಪುಟಗಳಿದ್ದವು. ಅದರ ಬೆಲೆ ಆರು ರೂಪಾಯಿ, ವಾರ್ಷಿಕ ಚಂದಾ ಒಂದೂವರೆ ರೂಪಾಯಿ. ಪ್ರಥಮ ಸಂಚಿಕೆಯಲ್ಲಿ ಕೆಳಕಂಡ ಬರಹಗಳು ಪ್ರಕಟವಾಗಿದ್ದವು.

೧. 'ಶ್ರೀ'ಯವರ ಚಕ್ರವರ್ತಿಯ ಮೆಚ್ಚುಗೆ
೨. ಕುವೆಂಪು ಅವರ 'ಕಂದನಿವನು ಕೈ ಬಿಡದಿರಮ್ಮ' ಎಂಬ ಕವನ
೩. ಎಂ.ನರಸಿಂಹಮೂರ್ತಿಯವರ 'ಕನ್ನಡ ಸಂಕ್ಷಿಪ್ತ ಲಿಪಿಕವನ'.
೪. ಶಂಭಾ ಜೋಷಿಯವರ 'ಕನ್ನಡ ಮತ್ತು ಕನ್ನಾಡು'
೫. ಕನ್ನಡ ಅಕ್ಷರ ಸಂಸ್ಕರಣ
೬. ಶ್ರೀ ಶೌರೀ
೭. ಮತಿಘಟ್ಟ ಕೃಷ್ಣಮೂರ್ತಿಯವರ ನಾಡಪದಗಳು.
೮. ಮಲ್ಲಯ್ಯ ಮಾನ್ಸೋಮಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಕೈಗೊಳ್ಳಬೇಕಾಗಿರುವ ವ್ಯವಸ್ಥೆ ಕುರಿತ ವರದಿ.

೧೯೩೪ ರಿಂದ 'ಕನ್ನಡ ನುಡಿ' ಪಕ್ಷ ಪತ್ರಿಕೆಯಾಗಿ ಮುಂದುವರಿಯಿತು. ೩೨ ಪುಟಗಳ ಬದಲಾಗಿ ೧೬ ಪುಟಗಳ ಎರಡು ಪಕ್ಷ ಪತ್ರಿಕೆಗಳಾಗಿ ಪ್ರತಿ ತಿಂಗಳೂ ೧ ನೇ ಮತ್ತು ೧೯ ನೇ ತಾರೀಖು ಪ್ರಕಟಿಸಲ್ಪಟ್ಟಿತು. ಮೊದಲನೆಯ ಭಾಗದಲ್ಲಿ ಪರಿಷತ್ತಿನ ಚಟುವಟಿಕೆಗಳು, ಎರಡನೆಯ ಭಾಗದಲ್ಲಿ ಹೊರನಾಡಿನ ಕನ್ನಡ ಸಂಘಗಳ ಕಾರ್ಯ ಕಲಾಪಗಳ ಸಂಗ್ರಹವನ್ನು ಪ್ರಕಟಿಸಲಾಗುತ್ತಿತ್ತು.

'ಕನ್ನಡ ನುಡಿ' ಪತ್ರಿಕೆ ಹಾಗೂ ಗ್ರಂಥಗಳ ಪ್ರಕಟಣೆಗಳಿಂದ ಪರಿಷತ್ತಿನ ಮುದ್ರಣ ವೆಚ್ಚಗಳು ಹೆಚ್ಚುತ್ತಿದ್ದು ಪರಿಷತ್ತಿಗೆ ಸ್ವಂತ ಅಚ್ಚುಕೂಟದ ಅಗತ್ಯ ಕಂಡುಬಂತು. ಬಿ.ಎಂ.ಶ್ರೀ.ಯವರ ಅಧ್ಯಕ್ಷತೆಯಲ್ಲಿ ಪರಿಷತ್ತಿನ ಕಾರ್ಯಕಾರಿ ಸಮಿತಿ ನಿರ್ಧರಿಸಿ ೧೯೩೫ ರಲ್ಲಿ ೬,೫೦೦ ರೂ ವೆಚ್ಚದಲ್ಲಿ ಅಚ್ಚುಕೂಟವೊಂದನ್ನು ಖರೀದಿಸಿತು. ಬಿ.ಎಂ.ಶ್ರೀ.ಯವರೇ ಅಚ್ಚುಕೂಟಕ್ಕೆ ೫,೦೦೦ ರೂ. ದಾನವಾಗಿ ಕೊಟ್ಟರಲ್ಲದೆ ಪರಿಷತ್ತಿನ ಕಟ್ಟಡದ ದೀಪಾಲಂಕಾರಕ್ಕೆ ೨೦೦ ರೂ. ನೀಡಿದರು. ಅವರ ಔದಾರ್ಯದ ನೆನಪಿನಲ್ಲಿ ಪರಿಷತ್ತಿನ ಅಚ್ಚುಕೂಟ 'ಬಿ.ಎಂ.ಶ್ರೀ. ಅಚ್ಚುಕೂಟ' ಎನ್ನುವ ಹೆಸರು ಪಡೆಯಿತು.

೧೯೩೫ರ ಅಕ್ಟೋಬರ್ ೮ನೇ ತಾರೀಖು ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತು ಬಿ.ಎಂ.ಶ್ರೀ.ಯವರ ಸಹಕಾರದಿಂದ 'ಮಹಿಳಾಶಾಖೆ' ಪ್ರಾರಂಭಿಸಿತು.. ಮಹಿಳಾ ಶಾಖೆಯ ಪ್ರಥಮ ಸಭೆಗೆ ಅನೇಕ ಮಹಿಳೆಯರು ಆಗಮಿಸಿದ್ದರು. ಕೆ.ಜಿ.ಸಂಪತ್ಕುಮಾಚಾರ್ಯರು ಕಾವ್ಯವಾಚನ ಮಾಡಿದರು. ಬಿ.ಎಂ.ಶ್ರೀ. ಸಭೆಯನ್ನುದ್ದೇಶಿಸಿ ಕೆಳಕಂಡಂತೆ ಭಾಷಣ ಮಾಡಿದರು:-

"ಕನ್ನಡ ಸಾಹಿತ್ಯ ಪರಿಷತ್ತಿನ ಅಂಗವಾಗಿ ಮಹಿಳೆಯರ ಶಾಖೆಯೊಂದು ಇರಬೇಕಾದುದು ಅತ್ಯಾವಶ್ಯಕವೆಂಬ ವಿಷಯ ಬಹಳ ದಿನಗಳಿಂದ ಪರಿಷತ್ತಿನ ಗಮನದಲ್ಲಿತ್ತು. ಇದುವರೆವಿಗೂ ಈ ಉದ್ದೇಶವನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗಿರಲಿಲ್ಲ. ಈಗ ಅದಕ್ಕೆ ಸುಯೋಗ ಒದಗಿರುವುದು ಅತ್ಯಂತ ಸಂತೋಷದ ವಿಷಯವಾಗಿದೆ. ಶ್ರೀಮತಿಯರಾದ ಸುಶೀಲಮ್ಮ, ರತ್ನಮ್ಮ, ಡಿ.ಚಂಪಾಬಾಯಿ ಮತ್ತಿತರರು ಶ್ರದ್ಧಾಸಕ್ತಿಯಿಂದ ಕೆಲಸ ಮಾಡಿ ಈ ಉದ್ದೇಶವನ್ನು ಸಫಲಗೊಳಿಸಿದ್ದಾರೆ. ಅವರಿಗೆ ನಮ್ಮ ಧನ್ಯವಾದಗಳು.

ಒಂದು ಸಂಸ್ಥೆಯಾಗಲಿ, ಅದರ ಕಾರ್ಯಗಳು, ಸಫಲವಾಗಬೇಕಾದರೆ ಮಹಿಳೆಯರ ಸಹಾಯ, ಸಹಕಾರ ಅತ್ಯವಶ್ಯಕ. ಈಶ್ವರನ ಪಕ್ಕದಲ್ಲಿ ಪಾರ್ವತಿ, ವಿಷ್ಣುವಿನ ಪಾರ್ಶ್ವದಲ್ಲಿ ಲಕ್ಷ್ಮೀ, ಬ್ರಹ್ಮನ ಸಮೀಪದಲ್ಲಿ ಸರಸ್ವತಿ ಇಲ್ಲದಿದ್ದಲ್ಲಿ

ಈಶ್ವರ, ವಿಷ್ಣು, ಬ್ರಹ್ಮ, ಶಕ್ತಿಹೀನರೆಂದು ಹೇಳಲೇನಡ್ಡಿಯಿಲ್ಲ ಯಾಕೆಂದರೆ ಸ್ತ್ರೀಯರು ಪುರುಷರ ಅರ್ಧಾಂಗಿಯರೆಂದು ಹೇಳಲಾಗಿದೆ. **(ಭಾಷಣದ ಸಾರಾಂಶ)**

ಬಿ.ಎಂ.ಶ್ರೀ. ಪರಿಷತ್ತಿನಲ್ಲಿ 'ಮಹಿಳಾಗೋಷ್ಠಿ' ಮತ್ತು 'ಮಕ್ಕಳ ಗೋಷ್ಠಿ'ಗಳನ್ನು ಪ್ರಾರಂಭಿಸಿ ಮಹಿಳೆಯರಿಗಾಗಿ ಕಥಾಸ್ಪರ್ಧೆಗಳನ್ನು ಏರ್ಪಡಿಸುತ್ತ ಅವರ ಸಾಹಿತ್ಯ ರಚನಾಕಾರ್ಯವನ್ನು ಪ್ರೋತ್ಸಾಹಿಸುತ್ತಿದ್ದರು. ಇದರಿಂದಾಗಿ ಮಹಿಳೆಯರು, ಮಕ್ಕಳು ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯ ಬಗ್ಗೆ ತಿಳುವಳಿಕೆ ಪಡೆಯುವಂತಾಯಿತು.

೧೯೩೮ರಲ್ಲಿ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಬಿ.ಎಂ.ಶ್ರೀ.ಗೆ ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು 'ರಾಜಸೇವಾಸಕ್ತ' ಎಂಬ ಬಿರುದನ್ನು ನೀಡಿ ಸನ್ಮಾನಿಸಿದರು. ಈ ಅಪರೂಪ ಹಾಗೂ ಅಸಮಾನ್ಯ ಪ್ರಶಸ್ತಿ ಪಡೆದ ಅವರನ್ನು ಪರಿಷತ್ತು ಮತ್ತಿತರ ಹಲವಾರು ಸಂಘ ಸಂಸ್ಥೆಗಳು ಸನ್ಮಾನಿಸಿ ತಮ್ಮ ಸಂತೋಷ, ಸಂಭ್ರಮವನ್ನು ವ್ಯಕ್ತಪಡಿಸಿದವು. 'ಶ್ರೀ'ಯವರೂ ಸಂತೋಷಪಟ್ಟರು. ಅದಕ್ಕೆ ಕಾರಣ ನಾಡು, ನುಡಿಯ ಪ್ರಗತಿಗಾಗಿ ಶ್ರಮಿಸುತ್ತಿದ್ದ ಮಹಾರಾಜರಲ್ಲಿ ಅವರಿಗಿದ್ದ ಭಕ್ತಿ ಮತ್ತು ಗೌರವ. ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಹಬ್ಬವನ್ನು ಅದ್ದೂರಿಯಿಂದ ಆಚರಿಸಿ ಪರಿಷತ್ತಿಗೆ ಮಹಾರಾಜರ ಆಶ್ರಯ, ನೆರವು ಮತ್ತು ಪ್ರೋತ್ಸಾಹವನ್ನು ದೊರಕಿಸಿಕೊಟ್ಟರು.

ಪರಿಷತ್ತಿಗೆ ಶಾಶ್ವತ ನಿಧಿಯನ್ನು ಸಂಗ್ರಹಿಸಲು ಮುಂದಾದರು. ಹಣ ಸಂಗ್ರಹಿಸುವಾಗ 'ನಾನು ಕನ್ನಡ ತಾಯಿಗಾಗಿ ಭಿಕ್ಷೆ ಬೇಡುವ ದಾಸಯ್ಯ, ಕನ್ನಡದ ಕಾವಲು ನಾಯಿ. ಆದರೆ ಕಚ್ಚುವ ನಾಯಲ್ಲ, ಬೊಗಳುವ ನಾಯಿ" ಎಂದು ಹೇಳುತ್ತಿದ್ದರು.

ಬಿ.ಎಂ.ಶ್ರೀ ೧೯೪೦ ರಲ್ಲಿ ತಿರುಪತಿಯಲ್ಲಿ ನಡೆದ ಪ್ರಾಚ್ಯ ವಿದ್ಯಾ ಸಮ್ಮೇಳನದ ಕನ್ನಡ ಶಾಖೆಯ ಅಧ್ಯಕ್ಷರಾಗಿದ್ದರು. ೧೯೪೧ ರಲ್ಲಿ ಪರಿಷತ್ತು ಅವರ ಐವತ್ತೇಳನೆಯ ಹುಟ್ಟಿದ ಹಬ್ಬವನ್ನು ಸಂಭ್ರಮದಿಂದ ಆಚರಿಸಿ 'ಸಂಭಾವನೆ' ಎಂಬ ಅಭಿನಂದನಾ ಗ್ರಂಥವನ್ನು ಅರ್ಪಿಸಿತು. ಅದೇ ವರ್ಷ ಹೈದರಾಬಾದಿನಲ್ಲಿ ಪರಿಷತ್ತು ಏರ್ಪಡಿಸಿದ್ದ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡ-ಕನ್ನಡ ನಿಘಂಟಿನ ಯೋಜನೆ ಜನ್ಮ ತಾಳಿತು. ೧೯೪೨ ರಲ್ಲಿ ಜನಸಾಮಾನ್ಯರಲ್ಲಿ ಕನ್ನಡ ಭಾಷೆ, ಸಾಹಿತ್ಯದಲ್ಲಿ ಆಸಕ್ತಿ ಮೂಡಿಸಲು 'ಕನ್ನಡ ಸಾಹಿತ್ಯ ಪರೀಕ್ಷೆ'ಗಳನ್ನು ಪರಿಷತ್ತಿನಲ್ಲಿ ಪ್ರಾರಂಭಿಸಿದರು. ವಯಸ್ಸಾಯಿತೆಂದೊ ಅಥವಾ ಬೇರೆ ಕಾರಣದಿಂದ ಶಾಲೆ, ಕಾಲೇಜುಗಳಲ್ಲಿ ಶಿಕ್ಷಣವನ್ನು ಮುಂದುವರಿಸಲು ಅನುಕೂಲವಿಲ್ಲದೆ, ಕನ್ನಡ

ಸಾಹಿತ್ಯವನ್ನು ವ್ಯಾಸಂಗ ಮಾಡುವ ಅಪೇಕ್ಷೆಯುಳ್ಳವರಿಗಾಗಿ ಈ ಪರೀಕ್ಷೆಗಳು ಪ್ರಾರಂಭವಾದವು. ವಿಶ್ವ ವಿದ್ಯಾನಿಲಯದ ಪದವಿ ಮಟ್ಟದವರೆಗೆ ಕನ್ನಡ ಭಾಷೆ, ಸಾಹಿತ್ಯದ ವ್ಯಾಸಂಗಕ್ಕಾಗಿ ಕಾವ, ಅಣುಗ, ಜಾಣ ಎಂಬ ಪರೀಕ್ಷೆಗಳನ್ನು ಯೋಜಿಸಲಾಯಿತು. ಅವರೂ ಅಧ್ಯಾಪಕರಲ್ಲಿ ಒಬ್ಬರಾಗಿ ಸೇವೆ ಸಲ್ಲಿಸಿದರು. ಕೆಲವು ಬದಲಾವಣೆಗಳೊಂದಿಗೆ ಈಗಲೂ ಈ ಪರೀಕ್ಷೆಗಳನ್ನು ಕರ್ನಾಟಕದ ಹಲವಾರು ಕೇಂದ್ರಗಳಲ್ಲಿ ಪರಿಷತ್ತು ನಡೆಸುತ್ತಿದೆ.

ಕರ್ನಾಟಕ ಏಕೀಕರಣದ ಪ್ರಥಮ ಚಳುವಳಿಗಾರರಾದ ಬಿ.ಎಂ.ಶ್ರೀ. ಕನ್ನಡಿಗರೆಲ್ಲ ಒಬ್ಬ ತಾಯಿಯ ಮಕ್ಕಳು, ಅವರೆಲ್ಲ ಒಂದಾಗಬೇಕು ಎನ್ನುವ ಭಾವನೆಯನ್ನುಂಟುಮಾಡಲು ಅಖಂಡ ಕರ್ನಾಟಕ ಯಾತ್ರೆಯನ್ನು ಕೈಗೊಂಡರು. ಸಾಹಿತ್ಯ ಕಾರ್ಯಕ್ರಮಗಳು, ಭಾಷಣಗಳ ಮೂಲಕ ಕನ್ನಡಿಗರಲ್ಲಿ ಭಾಷೆ, ನಾಡು, ಸಾಹಿತ್ಯದಲ್ಲಿ ಆಸಕ್ತಿ ಮೂಡಿಸಿದರು.

ಮಾತೃಭಾಷೆ, ದೇಶಭಾಷೆ, ರಾಷ್ಟ್ರಭಾಷೆ, ಭಾಷೆಗಳ ಮಹತ್ವ, ಭಾಷೆಗಳ ಮೇಲಾಟ 'ಕನ್ನಡ ನಾಡಿಗೆ ಕನ್ನಡವೇ ಗತಿ ಮುಂತಾದ ವಿಷಯಗಳನ್ನು ಕುರಿತು ಪರಿಷತ್ತಿನಲ್ಲಿ ಭಾಷಣ ಮಾಡಿದರು.

ಒಮ್ಮೆ ಭಾಷಣದಲ್ಲಿ 'ಧಾರವಾಡದ ಕನ್ನಡ ಗಂಡು ಕನ್ನಡ, ಮೈಸೂರು ಕನ್ನಡ ಹೆಣ್ಣು ಕನ್ನಡ, ಈ ಎರಡೂ ಭಾಷೆಗಳು ಒಂದುಗೂಡಿದರೆ, ಧಾರವಾಡದ ಗಂಡು, ಮೈಸೂರಿನ ಹೆಣ್ಣು ಮದುವೆಯಾದರೆ, ಆಗ ಕರ್ನಾಟಕದ ಏಕೀಕರಣವಾಗುತ್ತದೆ' ಎಂದು ಹೇಳಿ ಏಕೀಕರಣದ ಕನಸು ಕಂಡರು.

ಕನ್ನಡಿಗರ ಪುನರುಜ್ಜೀವನವಾಗಿ ಪರಿಷತ್ತು ಸಾರ್ವಜನಿಕರ ವಿದ್ಯಾಪೀಠ ವಾಗಬೇಕೆಂದು ಬಯಸಿದರು. ಉತ್ತರ ಮತ್ತು ದಕ್ಷಿಣ ಕರ್ನಾಟಕದಲ್ಲೆಲ್ಲ ಸಂಚರಿಸಿ ಎರಡರ ನಡುವೆ ಮೈತ್ರಿಯನ್ನು ಹೆಚ್ಚಿಸಿದರು. ಸಂಸ್ಕೃತಿ ಪ್ರಸಾರದ ಉದ್ದೇಶದಿಂದ ಮೂರು ದಿನಗಳ ಕಾರ್ಯಕ್ರಮ 'ಕನ್ನಡ ಹಬ್ಬ' ಸಾಹಿತ್ಯ, ಸಂಗೀತ, ಗಮಕ ಇತ್ಯಾದಿಗಳಿಗೆ ಮೀಸಲಾಯಿತು. ಉತ್ತರ ಕರ್ನಾಟಕದಲ್ಲಿ ಈ ಉತ್ಸವ ನಾಡಹಬ್ಬಕ್ಕೆ ಪೂರಕವಾಗಿತ್ತು.

ನಾಡಿನಲ್ಲೆಲ್ಲ ಸಂಚರಿಸಿ ಭಾಷಣಗಳ ಮೂಲಕ ನಾಡುನುಡಿಯ ಮಹತ್ವ ಕುರಿತು ಬೋಧಿಸಿದರು. ಕನ್ನಡಿಗರಿಗೆ ಸ್ಫೂರ್ತಿಯಾಗಿ, ಶಕ್ತಿಯಾಗಿ ಮಾರ್ಗದರ್ಶಕ ವ್ಯಕ್ತಿಯಾಗಿ ಉನ್ನತ ಮತ್ತು ಪೂಜ್ಯ ಸ್ಥಾನ ಪಡೆದರು. ನಾಡು, ನುಡಿಯ ಬೆಳವಣಿಗೆಗಾಗಿ ಪರಿಷತ್ತನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು.

**ಲಿಪಿ ಸಂಸ್ಕರಣೆ :**

ಬಿ.ಎಂ.ಶ್ರೀ. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಸದಸ್ಯರ ಮನ್ನಣೆ ಪಡೆದು ಕನ್ನಡ ಲಿಪಿ ಸುಧಾರಣೆಯನ್ನು ಕುರಿತು 'ಅಕ್ಷರ ಸಂಸ್ಕರಣ ಸಮ್ಮೇಳನ'ವನ್ನು ಏರ್ಪಡಿಸಿ ಅದರ ಅಧ್ಯಕ್ಷರಾಗಿದ್ದರು. ಅವರ ಚಿಂತನೆಗೆ ಡಿ.ವಿ.ಗುಂಡಪ್ಪ ಮತ್ತು ಎ.ಆರ್.ಕೃಷ್ಣಶಾಸ್ತ್ರಿಗಳು ಕೈ ಜೋಡಿಸಿದರು. "ನಮ್ಮ ನಾಡಿನಲ್ಲಿ ಸಾಕಷ್ಟು ಹಳ್ಳಿಗಳಿದ್ದು ಅವುಗಳಲ್ಲಿ ವಾಸಮಾಡುವ ಜನರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅವರು ವಿದ್ಯಾವಂತರಾಗಿ ಆತ್ಮವಿಶ್ವಾಸದಿಂದ ಬದುಕಲು ಮೊದಲು ಅಕ್ಷರಸ್ಥರಾಗಬೇಕು. ಕಲಿಯುವವರಿಗೆ ಸುಲಭವಾಗುವಂತೆ ಮಾಡಲು ಕನ್ನಡ ಭಾಷೆಯ ಲಿಪಿಯಲ್ಲಿ ಸುಧಾರಣೆಯಾಗಬೇಕು. ಅಕ್ಷರಗಳಲ್ಲಿರುವ ಒತ್ತಕ್ಷರಗಳು, ತಲೆಕಟ್ಟು, ದೀರ್ಘ, ಗುಡಿಸು ಇಲ್ಲವಾದರೆ ಕನ್ನಡ ಭಾಷೆಯ ಕಲಿಕೆ ಸುಲಭವಾಗಿ ಜನಪ್ರಿಯ ಹಾಗೂ ಜನಾದರಣೀಯವಾಗುತ್ತದೆ" ಎಂದು ಅಧ್ಯಕ್ಷ ಸ್ಥಾನದಿಂದ ಭಾಷಣ ಮಾಡಿದರಲ್ಲದೆ ಕೆಲವು ಕವನಗಳನ್ನು ಸುಧಾರಿಸಿದ ರೀತಿಯಲ್ಲಿ ಬರೆದು 'ಕನ್ನಡ ನುಡಿ' ಪತ್ರಿಕೆಯಲ್ಲಿ ಪ್ರಕಟಿಸಿದರು. ೧೯೪೪ ರಲ್ಲಿ ನಡೆದ ಪತ್ರಿಕಾ ಕಾರ್ಯಕರ್ತರ ಸಮ್ಮೇಳನದಲ್ಲಿ 'ಲಿಪಿ ಸುಧಾರಣೆ' ಕುರಿತು ಚರ್ಚಿಸಲಾಯಿತು.

ಬಿ.ಎಂ.ಶ್ರೀ. 'ಲಿಪಿ ಸಂಸ್ಕರಣೆ' ಯೋಜನೆಯನ್ನು ಸಾರ್ವಜನಿಕರ ಮುಂದಿಟ್ಟು ವ್ಯಕ್ತಪಡಿಸಿದ ಅಭಿಪ್ರಾಯಗಳಿವು :-

"ಭಾಷೆ ಸರಳವಾಗಿರಬೇಕು, ಶುದ್ಧವಾಗಿರಬೇಕು, ಕನ್ನಡ ಭಾಷೆಗೆ ಅಂಟಿಕೊಂಡಿರುವ ಪಾಂಡಿತ್ಯ ಪ್ರದರ್ಶನದ ಸೊಗಡು ತೊಲಗಿ ಭಾಷೆಯ ಬಿಗಿತ ಸಡಿಲಗೊಳ್ಳಬೇಕು. ಸಾಹಿತ್ಯ ಭಾಷೆ ಸಾಮಾನ್ಯರು ಆಡುವ ಭಾಷೆಗಿಂತ ತೀರಾ ದೂರವಿರಬಾರದು. ಹಸಿರುಗಟ್ಟಿದ ಹೊಂಡದ ನೀರಾಗಬಾರದು. ಹರಿವ ನೀರಾಗಬೇಕು, ಹೊಸ ಅಲೆಗಳೂ ಕೂಡಿಕೊಂಡು ಬರಬೇಕು. ಭಾಷಾಂತರಗಳಿಂದ ಕನ್ನಡದ ಬೊಕ್ಕಸವನ್ನು ತುಂಬಿಕೊಳ್ಳಬೇಕು."

ಅವರ ಈ 'ಲಿಪಿ ಸಂಸ್ಕರಣೆ' ಯೋಜನೆ ಕಟು ಟೀಕೆಗೆ ಗುರಿಯಾಯಿತು. 'ನಮ್ಮ ಭಾಷೆಯನ್ನು ನಾವು ಎತ್ತದೆ ಹೋದರೆ ಎತ್ತುವವರು ಯಾರು? ಎತ್ತುವುದಕ್ಕೆ ಹೋದಾಗ ತಡೆಯುವವರು ಯಾರು? ಎಂದು ಅವರು ಪ್ರಶ್ನಿಸಿದರು. ಬದುಕಿರುವವರೆಗೂ ಈ ಕಾರ್ಯದಲ್ಲಿ ನಿರತರಾಗಿದ್ದರು. ಆದರೆ ಹೆಚ್ಚು ವಿರೋಧ ವ್ಯಕ್ತವಾಗಿ ಈ ಯೋಜನೆಯನ್ನು ಕೈ ಬಿಡಲಾಯಿತು.

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಪರಿಷತ್ತಿನ ಸಭಾಂಗಣ ದಲ್ಲಿ ಖ್ಯಾತ ಪಿಟೀಲು ವಾದ್ಯಗಾರ ಟಿ.ಚೌಡಯ್ಯನವರ ಕಛೇರಿಯನ್ನು ಏರ್ಪಡಿಸಿದ್ದರು. ಕಚೇರಿ ಪ್ರಾರಂಭಿಸುವುದಕ್ಕೆ ಮೊದಲೆ ಅವರು 'ನಾನು ಕಾಲೇಜು ಮೆಟ್ಟಿಲು ಹತ್ತಿದವನಲ್ಲ, ಶ್ರೀಕಂಠಯ್ಯನವರ ಶಿಷ್ಯನಾಗುವ ಸುಯೋಗ ನನಗೆ ಲಭಿಸಲಿಲ್ಲ. ಆದರೆ ಮೈಸೂರಿನಲ್ಲಿ ಅವರನ್ನು ಕೆಲವು ಬಾರಿ ನೋಡಿದ್ದೇನೆ. ಅವರ ಭಾಷಣಗಳನ್ನು ಕೇಳಿ ಸಂತೋಷಪಟ್ಟಿದ್ದೇನೆ. ಈ ದಿನ ಅವರೇ ಸೂಚಿಸಿದ ಕೆಲವು ರಾಗಗಳನ್ನು ನುಡಿಸುತ್ತೇನೆ' ಎಂದರು. ಅಂದು ಅನೇಕರಿಗೆ ಬಿ.ಎಂ.ಶ್ರೀ. ಸಂಗೀತ ಪ್ರಿಯರು ಎನ್ನುವ ವಿಷಯ ತಿಳಿಯಿತು, ಆದರೆ ಅವರು ಕೇವಲ ಸಂಗೀತ ಪ್ರೇಮಿಯಾಗಿರದೆ ಸಂಗೀತ ಬಲ್ಲವರಾಗಿದ್ದರು ಎನ್ನುವ ಸತ್ಯ ಕುಟುಂಬದ ಕೆಲವೇ ಸದಸ್ಯರಿಗೆ ಮಾತ್ರ ತಿಳಿದಿತ್ತು. ಅವರು ಸೊಗಸಾಗಿ ವೀಣೆ ನುಡಿಸುತ್ತಿದ್ದರು.

ಮತ್ತೊಂದು ದಿನ ಪರಿಷತ್ತಿನಲ್ಲಿ ಬೆಂಗಳೂರಿನಲ್ಲಿರುವ ಸೆಂಟ್ರಲ್ ಕಾಲೇಜ್‌ನ ತಮಿಳು ವಿದ್ವಾಂಸರಾಗಿದ್ದ ರುದ್ರಮೂರ್ತಿಯವರು ತಮಿಳಿನಲ್ಲಿ ಭಾಷಣ ಮಾಡಿದರು. ನಂತರ ಸಮಾರಂಭದ ಅಧ್ಯಕ್ಷರಾಗಿದ್ದ ಬಿ.ಎಂ.ಶ್ರೀ. ತಮಿಳಿನಲ್ಲಿ ಸೊಗಸಾಗಿ ಮಾತಾಡಿ ಸಭಿಕರನ್ನು ಅಚ್ಚರಿಗೊಳಿಸಿದರು.

ಕನ್ನಡ ಸಾಹಿತ್ಯ ಪರಿಷತ್ತೆಂದರೆ ಬಿ.ಎಂ.ಶ್ರೀ, ಬಿ.ಎಂ.ಶ್ರೀ ಎಂದರೆ ಕನ್ನಡ ಸಾಹಿತ್ಯ ಪರಿಷತ್ತು ಎನ್ನುವ ಮಟ್ಟಿಗೆ ಅವರು ಹಲವಾರು ಉಪಯುಕ್ತ ಯೋಜನೆಗಳ ಮೂಲಕ ನಾಡುನುಡಿಯ ಬೆಳವಣಿಗೆಗೆ ಕಾರಣರಾದರು. ಕನ್ನಡ ಉದ್ಧಾರವಾಗಬೇಕಾಗಿರುವುದು ಕನ್ನಡಿಗರಿಂದ, ಕನ್ನಡಿಗರು ಉದ್ಧಾರವಾಗ ಬೇಕಾಗಿರುವುದು ಕನ್ನಡದಿಂದ ಎಂದು ಅವರು ಹೇಳಿದ ಮಾತು, ತೋರಿಸಿದ ಮಾರ್ಗ ಎಂದೆಂದಿಗೂ ಶಾಶ್ವತ.

೧-೧-೧೯೩೮ ರಿಂದ ೨೧-೧೨-೧೯೪೨ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದರು.

## ೨. ಬಿ.ಎಂ.ಶ್ರೀ : ವಯಸ್ಕರ ಶಿಕ್ಷಣ ಸಮಿತಿ

'ಮೈಸೂರು ಅಕ್ಷರ ಪ್ರಚಾರ ಸಮಿತಿ' ಬೆಳೆದು ಬೇರೆ ರೂಪುಗೊಂಡು ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯಾಗಿತ್ತು. ಅದರ ಆಗಿನ ಗುರಿ ಮೈಸೂರು ಸಂಸ್ಥಾನದ ಸಾಕ್ಷರತೆ ಮತ್ತು ವಯಸ್ಕರ ವಿದ್ಯಾಭ್ಯಾಸ. ಸಂಸ್ಥಾನದಲ್ಲಿ ಆಗ ಸಾಕ್ಷರತೆ ಶೇಕಡ ಹನ್ನೆರಡರಷ್ಟಿತ್ತೆಂದು ಜನಗಣತಿಯ ಲೆಕ್ಕ

ಆ ಲೆಕ್ಕಕ್ಕೆ ಶಾಲೆಗಳಲ್ಲಿ ಕಲಿಯುತ್ತಿದ್ದ ಮಕ್ಕಳ ಸಂಖ್ಯೆಯೇ ಮೂಲ ಆಧಾರ. ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾಭ್ಯಾಸ ದುಸ್ಥಿತಿಯಲ್ಲಿತ್ತು.

ವಯಸ್ಕರ ಶಿಕ್ಷಣ ಸಮಿತಿಯ ಉದ್ದೇಶ ಗ್ರಾಮಾಂತರಗಳಲ್ಲಿರುವ ವಯಸ್ಕರರು ವಿದ್ಯಾವಂತರಾದರೆ ಅವರು ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಲು ಆಸಕ್ತರಾಗಿ ಶಾಲೆಗೆ ಕಳುಹಿಸುತ್ತಾರೆ. ಅದರಿಂದ ಸಾಕ್ಷರರ ಸಂಖ್ಯೆ ಹೆಚ್ಚುತ್ತದೆ. ಈ ಉದ್ದೇಶ ನೆರವೇರಲು, ಯೋಜನೆಗಳನ್ನು ಸಿದ್ಧಪಡಿಸಲು ಅಧ್ಯಕ್ಷ ಸ್ಥಾನಕ್ಕೆ ಸೂಕ್ತ ವ್ಯಕ್ತಿಯನ್ನು ನೇಮಿಸಬೇಕೆಂದು ಸಮಿತಿ ಆಲೋಚಿಸಿ ಶ್ರೀ ಸಾಮಾನ್ಯರಲ್ಲಿ ಅನುಕಂಪ, ಸಹಾನುಭೂತಿಯಿಂದ ಪರಿಷತ್ತಿನಲ್ಲಿ ಅಪಾರ ಸೇವೆ ಸಲ್ಲಿಸಿ ಆದರ್ಶಪ್ರಾಯರಾಗಿದ್ದ ಬಿ.ಎಂ.ಶ್ರೀ.ಯವರನ್ನು ಅಧ್ಯಕ್ಷರನ್ನಾಗಿ ಮಾಡಲಾಯಿತು.

ಪ್ರಥಮ ವಯಸ್ಕರ ಸಮ್ಮೇಳನ ಜೂನ್ ೧೯೪೨ ರಲ್ಲಿ ನಡೆಯಿತು. ಸಂಸ್ಥಾನದ ದಿವಾನರಾಗಿದ್ದ ಮಾಧವರಾವ್ ಸಮ್ಮೇಳನವನ್ನು ಉದ್ಘಾಟಿಸಿದರು. ವಿದ್ಯಾಮಂತ್ರಿ ಇಮಾಮ್ ಪ್ರೋತ್ಸಾಹ ಭಾಷಣ ಮಾಡಿದರು. ಅಧ್ಯಕ್ಷರಾಗಿದ್ದ ಬಿ.ಎಂ.ಶ್ರೀ. ಸ್ವಾಗತ ಭಾಷಣದಲ್ಲಿ ಈ ರೀತಿ ಹೇಳಿದರು :-

"ವಿದ್ಯೆಯಿಲ್ಲದವನು ಪಶುವೆಂತಲೂ, ವಿದ್ಯೆಯಿಂದ ಅಮೃತವನ್ನು ಉಣ್ಣಬಹುದೆಂತಲೂ ಯಾವುದೂ ಜ್ಞಾನಕ್ಕೆ ಸರಿಯಿಲ್ಲವೆಂತಲೂ ಹಿರಿಯರು ಹೇಳಿದ್ದಾರೆ. ಜ್ಞಾನಕ್ಕೆ ವಿದ್ಯೆಯೂ ವಿದ್ಯೆಗೆ ಓದು ಬರಹವೂ ತಳಹದಿ. ಈಗ ನಾಡಿನಲ್ಲಿ ಎಲ್ಲೆಲ್ಲೂ ಓದುಬರಹವನ್ನು ಹರಡಬೇಕೆಂಬ ಕೂಗು ಕೇಳಿ ಬರುತ್ತಿದೆ. ನೂರಕ್ಕೆ ೧೦, ೧೫,'೨೦ ಹೀಗೆ ಅಕ್ಷರಸ್ಥರಿದ್ದರೆ ಸಾಲದು. ಬೇಗ ನೂರಕ್ಕೆ ೫೦, ಕಡೆಗೆ ನೂರಕ್ಕೆ ನೂರು, ಹೀಗೆ ಎಲ್ಲರೂ ವಿದ್ಯಾವಂತರಾಗುವುದಕ್ಕೆ ಅವಕಾಶ ಮಾಡಿಕೊಡಬೇಕೆಂಬ ಗುರಿಯನ್ನು ವಿಚಾರಪರರೆಲ್ಲರೂ ಒಪ್ಪಿ ಕೆಲಸಕ್ಕೆ ಕೈ ಹಚ್ಚುತ್ತಿದ್ದಾರೆ."

ಹೀಗೆ ಹೇಳಿ ಅವರು ವಯಸ್ಕರ ಶಿಕ್ಷಣದಲ್ಲಿ ಎಲ್ಲಾ ಬಗೆಯ ಜನರಿಗಿದ್ದ ಆಸಕ್ತಿ ಮತ್ತು ದೇಶದ ಪರಿಸ್ಥಿತಿಯನ್ನು ವಿವರಿಸುತ್ತ, "ಈ ಚಳುವಳಿ ಮೈಸೂರು ಸಂಸ್ಥಾನದಲ್ಲೆಲ್ಲ ಹೆಚ್ಚುತ್ತಿದೆ. ಘನ ಸರ್ಕಾರ, ಅಧಿಕಾರಿಗಳು, ಪ್ರಜಾ ನಾಯಕರೂ ಜಿಲ್ಲೆ ಜಿಲ್ಲೆಗಳಲ್ಲಿ ಪ್ರಮುಖ ನಗರಗಳಲ್ಲಿ ಈ ದೀಕ್ಷೆಯನ್ನು ವಹಿಸಿ ಕಾರ್ಯ ಮುಂದೆ ಸಾಗಬೇಕೆಂದು ತವಕಿಸುತ್ತಿದ್ದಾರೆ" ಎಂದು ಹೇಳಿ ಸಭೆಯಲ್ಲಿ ನೆರೆದಿದ್ದ ಪ್ರಮುಖರಲ್ಲಿ ಭಿನ್ನವಿಸಿಕೊಂಡರು.

"ನಾಡ ಹಿರಿಯರೆ, ತಮ್ಮ ಸಹಾನುಭೂತಿ, ಸಹಾಯ, ಸಲಹೆಗಳಿಂದ ಅಗಾಧವೂ, ಅಪಾರವೂ ಆದ ಆದರೆ ಅತ್ಯಗತ್ಯವಾದ ನಮ್ಮ ಕಾರ್ಯದಲ್ಲಿ ನಮಗೆ ಧೈರ್ಯವೂ ಮಾರ್ಗದರ್ಶನವೂ ಉಂಟಾಗುವುದೆಂಬ ನಂಬಿಕೆಯಿಂದ ಈ ಸಮ್ಮೇಳನವನ್ನು ಕರೆದಿರುತ್ತೇವೆ. ವಿದ್ಯಾವಂತರಾದ ಪ್ರಜೆಗಳ ಮೇಲೆ ಪ್ರಜಾಪ್ರಭುತ್ವ ನಿಂತಿದೆ ಎಂಬುದನ್ನು ಅರಿತವರು, 'ಇದು ಬರಿಯ ಬಲವಲ್ಲ, ಬರಿಯ ಬಹುಮತವೇ ಅಲ್ಲ, ಹಕ್ಕುಗಳಿಗಿಂತಲೂ ಹೆಚ್ಚಾಗಿ ಜವಾಬ್ದಾರಿಯನ್ನು ಬಯಸುವ ಬಲ್ಲಾಳುಗಳ ಬಾಳ್ವಿಕೆಯ ಆಳ್ವಿಕೆ, ಇದೇ ನಾಡಗುರಿ, ಬೇಗ ಆಗಬೇಕೆಂಬ ಹಂಬಲ."

ಬಿ.ಎಂ.ಶ್ರೀ.ಯವರ ಸತ್ವಪೂರ್ಣವಾದ ಭಾಷಣ ಪ್ರಭಾವಶಾಲಿಯಾಗಿತ್ತು. ಅವರ ಪ್ರಭಾವದಿಂದ ಸರ್ಕಾರ ಆಗ ನೀಡುತ್ತಿದ್ದ ಹನ್ನೆರಡು ಸಾವಿರ ರೂಪಾಯಿಗಳ ನೆರವು ಲಕ್ಷ ರೂಪಾಯಿಗೆ ಏರಿತು. ಎಲ್ಲ ರಂಗದ ಜನರು ಸಮಿತಿಯ ಕಾರ್ಯಗಳಲ್ಲಿ ಭಾಗವಹಿಸಲು ಮುಂದಾದರು.

"ನಮ್ಮ ನಾಡಿನಲ್ಲಿ ಹಳ್ಳಿಗಳು ಹೆಚ್ಚು. ಹಳ್ಳಿ ಸೊಗಸಾಗಿ ಬಾಳಿದರೆ ಪಟ್ಟಣದ ಬಾಳೂ ಸೊಗಸಾಗಿ ಹಸನಾಗುತ್ತದೆ. ನೆಲ ಉಳುವವನು, ಬಿತ್ತುವವನು ನಮ್ಮ ನಾಡಿನ ಅಡಿಗಲ್ಲು, ಒರೆಗಲ್ಲು, ನಿಮ್ಮನ್ನು ಬಾಳಿಸಿ ನಾವೂ ಬಾಳಬೇಕೆಂದು ಈ ವಯಸ್ಕರ ಶಿಕ್ಷಣ ಎಂಬ ಪವಿತ್ರ ಸೇವೆಯನ್ನು ಕೈಗೊಂಡಿದ್ದೇವೆ. ವಿದ್ಯೆಯ ಬಾಗಿಲು ತೆರೆದು ಮನಸ್ಸು ಸಂತೋಷದಿಂದ ಓಲಾಡಬೇಕು. ಎಲ್ಲರೂ ಅಣ್ಣ ತಮ್ಮಂದಿರಂತೆ ತಿಳುವಳಿಕೆಯಿಂದ ನಮ್ಮ ನಾಡು, ನುಡಿ ಮತ್ತು ದೊರೆಗಳ ಕೀರ್ತಿಯನ್ನು ಬೆಳೆಸಬೇಕು ಇದೇ ನಮ್ಮ ಆಸೆ, ನಮ್ಮ ಹಂಬಲಿಕೆ.

ಈ ರೀತಿಯ ಪ್ರೋತ್ಸಾಹದ ಮಾತುಗಳನ್ನು ಬಿ.ಎಂ.ಶ್ರೀ. ಉತ್ಸಾಹದಿಂದ ಹೇಳುತ್ತ ವಿದ್ಯಾವಂತರನ್ನು, ಕಾರ್ಯಕರ್ತರನ್ನು ಹುರಿದುಂಬಿಸುತ್ತಿದ್ದರು. ಮಹಾರಾಜ ಕಾಲೇಜಿನ ವಿದ್ಯಾರ್ಥಿಸಂಘದ ಕಾರ್ಯಕ್ರಮಗಳಲ್ಲಿ ಅಕ್ಷರ ಪ್ರಚಾರವನ್ನು ಪರಿಚಯಿಸಿದರು. ಕ್ರಮೇಣ ಈ ಸಾಧನೆ ವಿಶ್ವವಿದ್ಯಾನಿಲಯದ ಅಧಿಕಾರಿಗಳ ಮೆಚ್ಚುಗೆ ಪಡೆಯಿತು. ಆಗ ಕುಲಪತಿಗಳಾಗಿದ್ದ ಎನ್.ಎಸ್. ಸುಬ್ಬರಾಯರು ಪ್ರೋತ್ಸಾಹಿಸಿದರು ಮತ್ತು ಧನ ಸಹಾಯ ಮಾಡಿದರು.

೧೯೪೦ನೇ ಇಸವಿ ಜುಲೈನಲ್ಲಿ ವಿದ್ಯಾರ್ಥಿಸಂಘ ಅಕ್ಷರ ಪ್ರಚಾರಕ್ಕಾಗಿ ಒಂದು ಉಪಸಮಿತಿಯನ್ನೂ ರಚಿಸಿತು. ಮೈಸೂರಿನ ಕೃಷ್ಣರಾಜೇಂದ್ರ ಮಿಲ್ ಮತ್ತು ಭದ್ರಾವತಿಯ ಉಕ್ಕಿನ ಕಾರ್ಖಾನೆ ಅಕ್ಷರ ಪ್ರಚಾರ ತರಗತಿಗಳನ್ನು ತೆರೆದವು. ಮೈಸೂರಿನಂತೆ ಬೆಂಗಳೂರಿನಲ್ಲೂ ಬಿ.ಎಂ.ಶ್ರೀಯವರ ಅಧ್ಯಕ್ಷತೆಯಲ್ಲಿ

ಅಕ್ಷರ ಪ್ರಚಾರ ಸಮಿತಿಯ ರಚನೆಯಾಯಿತು. ನಗರದ ಕಾರ್ಮಿಕರಿಗೆ ಅಕ್ಷರ ಪ್ರಚಾರ ತರಗತಿಗಳು ಪ್ರಾರಂಭವಾದವು. ೧೯೪೧ ರಲ್ಲಿ ಸಂಸ್ಥಾನದ 'ಅಕ್ಷರ ಪ್ರಚಾರ ಸಮಿತಿ' ಅವರ ಅಧ್ಯಕ್ಷತೆಯಲ್ಲಿ ಸ್ಥಾಪನೆಯಾಯಿತು. ನವಸಾಕ್ಷರರಿಗೆ ಸರಳ ಭಾಷೆಯಲ್ಲಿ ಪುಸ್ತಕಗಳ ರಚನೆಯಾಯಿತು. ೧೯೪೨ ರಲ್ಲಿ ಪ್ರಚಾರ ಸಮಿತಿಯ ಸಹಕಾರದೊಡನೆ ಕನ್ನಡ ಸಾಹಿತ್ಯ ಪರಿಷತ್ತು ಮತ್ತೊಂದು ಸಭೆ ಸೇರಿ ಸುಧಾರಣೆಗಳನ್ನು ಸೂಚಿಸಿತು.

ಬಿ.ಎಂ.ಶ್ರೀ. ನವೆಂಬರ್ ೧೯೪೧ರಿಂದ ಜೂನ್ ೧೯೪೩ ರವರೆಗೆ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಹಳ್ಳಿ ಹಳ್ಳಿಗೆ ತಿರುಗಿದರು. ಭಾಷಣ ಮಾಡಿದರು. 'ಅಕ್ಷರ ಕಲಿಯಿರಿ' ಎಂಬ ಮಂತ್ರವನ್ನು ಸ್ಫೂರ್ತಿದಾಯಕವಾಗಿ ಬೋಧಿಸಿದರು. ಧಾರವಾಡದ ಕಾಲೇಜಿಗೆ ಹೋದ ನಂತರ ಸಮಿತಿಯಿಂದ ದೂರವಾಗಬೇಕಾಯಿತು. ಬೀಳ್ಕೊಡುವಾಗ 'ನನಗೆ ಬೆಳಕನ್ನು ಕಳುಹಿಸಿ ಕೊಡುತ್ತಿರಿ' ಎಂದು ಕೊನೆಯ ಮಾತಾಗಿ ಹೇಳಿದರು. ಸಮಿತಿಯು 'ಕಾಣಿಕೆ' ಎಂಬ ಕೃತಿಯನ್ನು ಅವರಿಗೆ ಅರ್ಪಿಸಿ ಸನ್ಮಾನಿಸಿ ಬೀಳ್ಕೊಡಲಾಯಿತು.



# ಬಿ.ಎಂ. ಶ್ರೀ : ಕಾಣಿಕೆ

## ೧. ಗ್ರಂಥಗಳ ಕಾಣಿಕೆ

**೧. ಕಿರಿಯ ಕಾಣಿಕೆ : (೧೯೨೮)**

ಮಹಾರಾಜ ಕಾಲೇಜಿನ 'ಕರ್ಣಾಟಕ ಸಂಘ' ೧೯೨೮ರಲ್ಲಿ ಹೊಸ ಛಂದಸ್ಸಿನ ಭಾವಗೀತಗಳನ್ನು ಸಂಗ್ರಹಿಸಿ ಅದನ್ನು 'ಕಿರಿಯ ಕಾಣಿಕೆ' ಎಂಬ ಹೆಸರಿನಲ್ಲಿ ಪ್ರಕಟಿಸಿ 'ಶ್ರೀ'ಅವರಿಗೆ ಸಮರ್ಪಿಸಿತು. ಅಂದಿನ ತರುಣ ವಿದ್ಯಾರ್ಥಿಗಳಾಗಿದ್ದ ಕೆ.ವಿ. ಪುಟ್ಟಪ್ಪ, ಪು.ತಿ.ನ., ತೀನಂಶ್ರೀ, ಎಲ್. ಗುಂಡಪ್ಪ, ಡಿ.ಎಲ್. ನರಸಿಂಹಾಚಾರ್ಯರು 'ಕಿರಿಯ ಕಾಣಿಕೆಗಾಗಿ ಹಲವು ಕವನಗಳನ್ನು ರಚಿಸಿದ್ದರು. ಕೆ.ವಿ. ಪುಟ್ಟಪ್ಪನವರ 'ಕಿಂದರಿಜೋಗಿ' ಮೊದಲು ಪ್ರಕಟವಾದದ್ದು ಈ ಕವನ ಸಂಕಲನದಲ್ಲಿ.

**೨. ಸಂಭಾವನೆ : (೧೯೪೧)**

ಬಿ.ಎಂ.ಶ್ರೀಕಂಠಯ್ಯನವರನ್ನು ಕುರಿತು ಹಲವಾರು ಸಂಭಾವನಾ ಗ್ರಂಥಗಳು ಪ್ರಕಟವಾಗಿದ್ದರೂ ಅವುಗಳಲ್ಲಿ ಮೊಟ್ಟ ಮೊದಲ ಪುಸ್ತಕ ೧೯೪೧ ರಲ್ಲಿ ಪ್ರಕಟವಾದ 'ಸಂಭಾವನೆ' ಎಂಬ ಲೇಖನ ಸಂಗ್ರಹ ಸಂಪುಟ. ಐವತ್ತೇಳನೆಯ ಹುಟ್ಟಿದ ಹಬ್ಬದ ಸಮಾರಂಭದ ಸಂದರ್ಭದಲ್ಲಿ ಅವರ ಶಿಷ್ಯರು, ಬಂಧುಗಳು, ಅಭಿಮಾನಿಗಳು ಈ ಅಭಿನಂದನಾ ಗ್ರಂಥವನ್ನು ಪರಿಷತ್ಮಂದಿರದಲ್ಲಿ ಅರ್ಪಿಸಿ ಸನ್ಮಾನಿಸಿದರು. ಸಂಪಾದಕ ಮಂಡಲಿಯ ಅಧ್ಯಕ್ಷರಾಗಿದ್ದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಈ ಗ್ರಂಥಕ್ಕೆ 'ಸಂಭಾವನೆ' ಎನ್ನುವ ಹೆಸರನ್ನು ಸೂಚಿಸಿದರು. ಚ.ವಾಸುದೇವಯ್ಯ ಹಿತವಚನ ನೀಡಿ ಬಿ.ಎಂ.ಶ್ರೀ.ಯವರನ್ನು ಆಶೀರ್ವದಿಸಿದ್ದಾರೆ. ಐನೂರು ಐವತ್ತೊಂಭತ್ತು ಪುಟಗಳಿರುವ ಈ ಗ್ರಂಥದಲ್ಲಿ ವಿದ್ವಾಂಸರುಗಳು ಬರೆದಿರುವ ಎಪ್ಪತ್ತೈದು ವಿಚಾರಪೂರಿತ ಮಹತ್ವದ ಲೇಖನಗಳಿವೆ. ಅದರ ಬೆಲೆ ನಲವತ್ತು ರೂಪಾಯಿಗಳು.

ಲೇಖನಗಳನ್ನು ಸೋಸಲೆ ಗರಳಪುರಿ ಶಾಸ್ತ್ರಿಗಳು, ಕರಂಗೂಡು ಶಂಕರಭಟ್ಟರು, ಮಾಸ್ತಿ ನರಸಿಂಹರಾಯರು, ಜಿ.ಪಿ.ರಾಜರತ್ನಂ, ಕೆ.ವೆಂಕಟ ರಾಮಪ್ಪ, ಅನಂತರಂಗಾಚಾರ್ಯರು, ಎಲ್.ಗುಂಡಪ್ಪ, ಪು.ತಿ.ನ., ದೇವುಡು ನರಸಿಂಹಶಾಸ್ತ್ರಿಗಳು, ಎಸ್.ವಿ.ಪರಮೇಶ್ವರ ಭಟ್ಟರು, ಎಸ್.ಎನ್.ಮಾಳವಾಡ, ಕುವೆಂಪು. ಎ.ಎನ್.ಮೂರ್ತಿರಾವ್, ತಿ.ನಂ.ಶ್ರೀ.ಶಿವರಾಮಕಾರಂತ, ವಿ.ಸೀತಾರಾಮಯ್ಯ ಶ್ರೀ ಮುಗಳಿ, ಮುದವೀಡು ಕೃಷ್ಣರಾಯರು, ತಿ.ತಾ.ಶರ್ಮ, ಬೆನಕಲ್ ರಾಮರಾಯರು, ಎಸ್.ವಿ.ರಂಗಣ್ಣ, ಎಂ.ಆರ್.ಶ್ರೀನಿವಾಸಮೂರ್ತಿ, ಬಿ.ಚಂಪಾಬಾಯಿ, ಎಸ್.ಸೀತಾದೇವಿ ಮೊದಲಾದವರು ಬರೆದಿದ್ದಾರೆ.

'ಸಂಭಾವನೆ' ಗ್ರಂಥ ಕನ್ನಡ ಸಾಹಿತ್ಯ ಲೋಕದಲ್ಲೆ ಮೊದಲನೆಯ ಅಭಿನಂದನಾ ಗ್ರಂಥವೆಂಬ ಹೆಗ್ಗಳಿಕೆಗೆ ಪಾತ್ರವಾಗಿ ಇತರ ಅಭಿನಂದನಾ ಗ್ರಂಥಗಳಿಗೆ ನಾಂದಿಯಾಯಿತು. ಮಾದರಿ ಗ್ರಂಥವಾಗಿ ಪ್ರಕಟಗೊಂಡು ಒಂದು ನೂತನ ಪರಂಪರೆಯನ್ನು ಸೃಷ್ಟಿಸಿತು. ನಂತರ ಅವರ ಶಿಷ್ಯರು, ಮಿತ್ರರು, ಬಂಧುಗಳು ಗ್ರಂಥಗಳನ್ನು ಪ್ರಕಟಿಸಿ ಅವರಿಗೆ ಅರ್ಪಿಸಿದರು. ಆದರೆ ಬಿ.ಎಂ.ಶ್ರೀ.ಯವರಿಗೆ ಜೀವಂತವಾಗಿದ್ದಾಗ ಅರ್ಪಣೆ ಮಾಡಿದ ಏಕೈಕ ಅಭಿನಂದನಾ ಗ್ರಂಥ 'ಸಂಭಾವನೆ' 'ಕನ್ನಡ ಸಾಹಿತ್ಯ ಪರಿಷತ್ತು' ೧೯೭೯ ಮತ್ತು ೨೦೦೩ರಲ್ಲಿ ಈ ಗ್ರಂಥದ ಮರುಮುದ್ರಣ ಮಾಡಿದೆ. ಗ್ರಂಥದ ಬೆಲೆ 200 ರೂಪಾಯಿಗಳು.

**೩. ಕಾಣಿಕೆ:** (೧೯೪೩) ಬಿ.ಎಂ.ಶ್ರೀ. ೧೯೪೧ ರಿಂದ ೧೯೪೩ ನೇ ಇಸವಿಯ ವರಿಗೆ ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದಿದ್ದ ಮೈಸೂರು ಸಂಸ್ಥಾನದ 'ವಯಸ್ಕರ ಶಿಕ್ಷಣ ಸಮಿತಿಯ ಪ್ರಥಮ ಅಧ್ಯಕ್ಷರಾಗಿ ಅನುಪಮ ಸೇವೆ ಸಲ್ಲಿಸಿದರು. 'ಅಕ್ಷರ ಪ್ರಚಾರ ಸಮಿತಿ' ಸ್ಥಾಪಿಸಿ ನಾಡಿನಾದ್ಯಂತ ಸಂಚರಿಸಿ ಭಾಷಣಗಳ ಮೂಲಕ ಅಕ್ಷರ ಪ್ರಚಾರ ಮತ್ತು ವಿದ್ಯಾಭ್ಯಾಸದ ಮಹತ್ವವನ್ನು ಎತ್ತಿ ಹಿಡಿದರು. 'ಅಕ್ಷರ ಕಲಿಯಿರಿ' ಎಂಬ ಮಂತ್ರವನ್ನು ಬೋಧಿಸಿದರು. ಮೈಸೂರಿನ ಮಹಾರಾಜ ಕಾಲೇಜಿನ 'ವಿದ್ಯಾರ್ಥಿ ಸಂಘ'ದ ಕಾರ್ಯಕ್ರಮಗಳಲ್ಲೂ ಕನ್ನಡ ಪ್ರಚಾರಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಅಕ್ಷರ ಪ್ರಚಾರ ಸಮಿತಿಯ ಅಧ್ಯಕ್ಷರಾಗಿ ಕಾರ್ಮಿಕರಿಗೆ ಅಕ್ಷರ ಕಲಿಸುವ ತರಗತಿಗಳನ್ನು ಪ್ರಾರಂಭಿಸಿದರು. ವಯಸ್ಕರರ ವಿದ್ಯಾಭ್ಯಾಸಕ್ಕಾಗಿ ಪುಸ್ತಕಗಳನ್ನು ಬರೆಸಿ ಪ್ರಕಟಿಸಿದರು. ಅವರು ಧಾರವಾಡದ ಕಾಲೇಜಿಗೆ ಪ್ರಾಂಶುಪಾಲರಾಗಲು ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯ

ಚಟುವಟಿಕೆಗಳಿಂದ ದೂರ ಸರಿಯಬೇಕಾಯಿತು. ಸಮಿತಿ 'ಕಾಣಿಕೆ' ಎಂಬ ಗ್ರಂಥವನ್ನು ಅವರಿಗೆ ಅರ್ಪಿಸಿ, ಸನ್ಮಾನಿಸಿ ಬೀಳ್ಕೊಟ್ಟಿತು.

೪. 'ಶ್ರೀ ಸಾಹಿತ್ಯ' (೧೯೪೩)

ಕರ್ನಾಟಕ ಸರ್ಕಾರದ 'ಕನ್ನಡ ಮತ್ತು ಸಂಸ್ಕೃತಿ' ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಜಯತೀರ್ಥ ರಾಜಪುರೋಹಿತರು ಬಿ.ಎಂ.ಶ್ರೀ.ಯವರ ಸಮಗ್ರ ಸಾಹಿತ್ಯವನ್ನು ಒಂದು ಸಂಪುಟದಲ್ಲಿ ಸಂಗ್ರಹಿಸಿ ಪ್ರಕಟಿಸಿ ಸಾರ್ವಜನಿಕರ ಕೈಗೆಟುಕುವಂತೆ ಮಾಡಬೇಕೆಂಬ ಸಲಹೆಯನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೂಚಿಸಿದರು. ಕುಲಪತಿಗಳಾಗಿದ್ದ ಡಿ.ವಿ.ಅರಸು ಆ ಯೋಜನೆಯನ್ನು ಪ್ರೋತ್ಸಾಹಿಸಿದರು. ಅದಕ್ಕೆ ಸೂಕ್ತ ಕಾರಣವಿತ್ತು.

ಬಿ.ಎಂ.ಶ್ರೀ. ಕನ್ನಡ ನಾಡು ನುಡಿಯನ್ನು ಕುರಿತು ಉಪನ್ಯಾಸಗಳನ್ನು ನೀಡಿದ್ದು, ಭಾಷಣಗಳನ್ನು ಮಾಡಿದ್ದು ಅಪಾರ. ಬರೆದದ್ದು ಕಡಿಮೆ. ಆದರೆ ಭಾಷಣಗಳೆಲ್ಲ ಉಳಿಯದೆ ಗಾಳಿಗೆ ತೂರಿಹೋಗಿತ್ತು. ಬರೆದದ್ದಾದರೂ ಶಾಶ್ವತವಾಗಿ ಉಳಿಯಲೆಂದು ತೀರ್ಮಾನಿಸಿ ನಿರ್ದೇಶಕರಾಗಿದ್ದ ಅನಿರುದ್ಧ ದೇಸಾಯಿಯವರ ನೆರವನ್ನು ಪಡೆದರು. ಕನ್ನಡ ಅಧ್ಯಯನ ಸಂಸ್ಥೆ ಅವರ ಭಾಷಣಗಳು, ಮುನ್ನುಡಿ, ವಿಮರ್ಶೆ ಗಳನ್ನು ಪ್ರಕಟಿಸುವುದಕ್ಕೆ ಮೊದಲು ಕೂಡಲಿ ಚಿದಂಬರಂ ಯಾವುದು ಮುಖ್ಯವೆಂದು ಕಾಣುವುದೋ ಆ ಭಾಗಗಳನ್ನು ಮಾತ್ರ ಉಳಿಸಿಕೊಂಡಿದ್ದರು. ಆದರೆ 'ಶ್ರೀ ಸಾಹಿತ್ಯ'ದಲ್ಲಿ 'ಶ್ರೀ'ಯವರ ಎಲ್ಲಾ ಭಾಷಣಗಳು, ಮುನ್ನುಡಿಗಳು, ಮತ್ತು ವಿಮರ್ಶೆಗಳನ್ನು ಪತ್ತೆ ಮಾಡಿ ಯಥಾವತ್ತಾಗಿ ಪ್ರಕಟಿಸಲಾಯಿತು.

ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದ ಡಾ। ಹಾ.ಮಾ.ನಾಯಕರ ನೇತೃತ್ವದಲ್ಲಿ 'ಶ್ರೀ ಸಾಹಿತ್ಯ' ಎಂಬ ಗ್ರಂಥ ಪ್ರಕಟವಾಯಿತು. ಡೆಮ್ಮಿ ಆಕಾರದ ೮೯೨ ಪುಟಗಳಿರುವ ಈ ಗ್ರಂಥ ಬಿ.ಎಂ.ಶ್ರೀ.ಯವರ ಹುಟ್ಟಿದ ಹಬ್ಬದ ದಿನ ಜನವರಿ ೩ ನೇ ತಾರೀಖು ೧೯೮೩ ನೇ ಇಸವಿ ಸೋಮವಾರ ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯ ಮಾನಸಿಕ ವಿಭಾಗದ ಸಭಾಂಗಣದಲ್ಲಿ ಡಾ: ಕೆ.ವಿ.ಪುಟ್ಟಪ್ಪನವರಿಂದ ಲೋಕಾರ್ಪಣೆಯಾಯಿತು. ಎ.ಎನ್.ಮೂರ್ತಿರಾಯರು ಸಮಾರಂಭದ ಮುಖ್ಯ ಅತಿಥಿಯಾಗಿದ್ದರು. ಪ್ರೊ. ಎಸ್.ವಿ.ರಂಗಣ್ಣ ಅಧ್ಯಕ್ಷತೆ ವಹಿಸಿದ್ದರು. ಈ ಮೂವರೂ ಬಿ.ಎಂ.ಶ್ರೀ.ಯವರ ಶಿಷ್ಯರು. ವಿ.ಸೀತಾರಾಮಯ್ಯ ಗ್ರಂಥಕ್ಕೆ ಐವತ್ತೂರು ಪುಟಗಳ 'ಪರಿಚಯ ಕಾಣಿಕೆ' ಬರೆದಿದ್ದಾರೆ.

'ಶ್ರೀ ಸಾಹಿತ್ಯ' ದ ಮೊದಲ ಆವೃತ್ತಿಗೆ ಡಾ। ಹಾ.ಮಾ.ನಾಯಕರು ಸುಧೀರ್ಘ ಹಾಗೂ ಮೌಲಿಕವಾದ ಮುನ್ನುಡಿಯನ್ನು ಬರೆದಿದ್ದಾರೆ. ಈ ಗ್ರಂಥ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಉದಾರ ನೆರವಿನಿಂದ ಪ್ರಕಟವಾಯಿತು. ಇದರಲ್ಲಿ 'ಶ್ರೀ'ಯವರ ಕೃತಿಗಳನ್ನು ಜೋಡಿಸಿರುವ ಕ್ರಮ ಹೀಗಿದೆ – ಕಾವ್ಯ, ನಾಟಕ, ಗದ್ಯಬರಹ, ಕೊನೆಯಲ್ಲಿ ಇಂಗ್ಲಿಷ್ ಬರಹಗಳು. ಕಾವ್ಯ, ನಾಟಕ ವಿಭಾಗಗಳಲ್ಲಿ ಪುಸ್ತಕಗಳನ್ನು ಪ್ರಕಟಣೆಯ ವರ್ಷದ ಅನುಕ್ರಮದಲ್ಲಿ ಜೋಡಿಸಿದೆ. ಗದ್ಯ ಬರಹಗಳಲ್ಲಿ ವಿಚಾರ ವಿಮರ್ಶೆ, ಲೇಖನಗಳು, ಸಾಹಿತ್ಯ ಚರಿತ್ರೆ, ಸಂಶೋಧನೆ–ಈ ಕ್ರಮವನ್ನು ಅನುಸರಿಸಿದೆ. ಇಂಗ್ಲಿಷ್ ಬರಹಗಳಲ್ಲಿ ಮೊದಲು A Handbook of Rhetoric ಪುಸ್ತಕವನ್ನೂ ಆಮೇಲೆ ಬಿಡಿ ಲೇಖನ, ವಿಮರ್ಶೆ, ಮುನ್ನುಡಿಗಳನ್ನೂ ಕೂಡಿಸಿದೆ.

ಕೃತಿಗಳ ಕರಡು ತಿದ್ದುವಾಗ ಪ್ರತಿಯೊಂದರ ಮೊದಲ ಆವೃತ್ತಿಯನ್ನು ಲೇಖಕರ ಕಾಲದಲ್ಲೆ ಎರಡನೆಯ ಆವೃತ್ತಿ ಪ್ರಕಟವಾಗಿದ್ದರೆ ಅದನ್ನು ಅನುಸರಿಸಿದೆ. ಎರಡನೆಯ ಮುದ್ರಣದಲ್ಲಿ ಇಂಗ್ಲಿಷ್ ಗೀತಗಳು, ಹೊಂಗನಸುಗಳು, ಪಾರಸಿಕರು, ಕನ್ನಡಗರಿಗೆ ಒಳ್ಳೆಯ ಸಾಹಿತ್ಯ, ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಛಂದಸ್ಸಿನ ಚರಿತ್ರೆಗಳಿಗೆ ಮೊದಲನೆಯ ಮುದ್ರಣಗಳನ್ನು ನೋಡಿದೆ. 'ಗದಾಯುದ್ಧ ನಾಟಕ' ಕೃತಿಗೆ ಮೊದಲನೆಯ ಹಾಗೂ ಎರಡನೆಯ ಮುದ್ರಣಗಳನ್ನು ನೋಡಿದೆ. 'ಅಶ್ವತ್ಥಾಮನ್'. 'ಪಾರಸಿಕರು' ಗಳನ್ನು ಅವು ಮೊದಲು ಪ್ರಕಟವಾದ 'ಪ್ರಬುದ್ಧ ಕರ್ಣಾಟಕದ ಆವೃತ್ತಿಯೊಡನೆ ಹೋಲಿಸಿದೆ. ಇಂಗ್ಲಿಷ್ ಪುಸ್ತಕದ ಎರಡು ಆವೃತ್ತಿಗಳಿವೆ. ಒಂದು 'Rhetoric Notes' ಇನ್ನೊಂದು A Hand book of Rhetoric ಇವುಗಳಲ್ಲಿ ಎರಡನೆಯದನ್ನೇ ಅಧಿಕೃತ ಪದ್ಯವನ್ನಾಗಿ ಸ್ವೀಕರಿಸಲಾಗಿದೆ. ಎರಡನೆಯ ಆವೃತ್ತಿಯಲ್ಲಿ ಕೆಲವನ್ನು ಸೇರಿಸಲಾಗಿದೆ. ಹಾಗೂ ಕೆಲವನ್ನು ಕೈ ಬಿಡಲಾಗಿದೆ. 'ಹೆಚ್ಚಿನ ಬರಹಗಳು' ಎಂಬ ವಿಭಾಗದಲ್ಲಿ ಸಂಕಲಿತವಾಗಿರುವ ಬರಹಗಳು ಪುಸ್ತಕ ರೂಪದಲ್ಲಿ ಒಟ್ಟಾರೆ ಪ್ರಕಟವಾಗುತ್ತಿರುವುದು ಇದೇ ಮೊದಲು. ಆದ್ದರಿಂದ ಈ ಭಾಗ 'ಶ್ರೀ ಸಾಹಿತ್ಯ' ದ ಮಹತ್ವದ ಭಾಗ ಎನ್ನಬಹುದು.

'ಶ್ರೀ ಸಾಹಿತ್ಯ' ದ ಮೊದಲನೆಯ ಆವೃತ್ತಿ ಬಿಡುಗಡೆಯಾದ ದಿನ ಗ್ರಂಥವನ್ನು ಕೇವಲ ಹತ್ತು ರೂಪಾಯಿಗೆ ಮಾರಾಟ ಮಾಡಲಾಯಿತು. ಸಾರ್ವಜನಿಕರಿಂದ ಉತ್ತಮ ಪ್ರತಿಕ್ರಿಯೆ ಲಭಿಸಿತು. ೨೦೦೨ ರಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಎರಡನೆಯ ಆವೃತ್ತಿ ಪ್ರಕಟಿಸಿದಾಗ ಅದರ ಬೆಲೆ ಇನ್ನೂರ ಐವತ್ತು ರೂಪಾಯಿಗಳು. ಅದರ ಪ್ರಧಾನ ಸಂಪಾದಕರು ಡಾ: ಡಿ.ಕೆ. ರಾಜೇಂದ್ರ,

"ಶ್ರೀ ಸಾಹಿತ್ಯ"ದ ಮುನ್ನುಡಿಯಲ್ಲಿ ಸಂಪಾದಕರಾಗಿದ್ದ ಡಾ.ಹಾ.ಮಾ. ನಾಯಕರು ಬಿ.ಎಂ.ಶ್ರೀಯವರ 'ಹೆಚ್ಚಿನ ಬರಹಗಳು' ಎಂಬ ಭಾಗದಲ್ಲಿ ಈ ರೀತಿ ಬರೆದಿದ್ದಾರೆ.

'ಇದುವರೆವಿಗೆ ಸಂಕಲನಗೊಳ್ಳದ ಬಿ.ಎಂ.ಶ್ರೀ ಯವರ ಎಲ್ಲಾ ಬರಹಗಳನ್ನು ಒಂದೆಡೆ ಸೇರಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ನಾವು ನಾನಾ ಆಕರಗಳಲ್ಲಿ ಹುಡುಕಿದ್ದೇವೆ. ಕೈಲಾದ ಪ್ರಯತ್ನಗಳನ್ನೆಲ್ಲ ಮಾಡಿದ್ದೇವೆ. ಅದರಲ್ಲಿ ನಾವು ಸಂಪೂರ್ಣ ಯಶಸ್ಸು ಗಳಿಸಿಲ್ಲ. ಬಿ.ಎಂ.ಶ್ರೀ. ಬೈಬಲನ್ನು ಕುರಿತು ಇಂಗ್ಲಿಷಿನಲ್ಲಿ ಸೊಗಸಾದ ಲೇಖನ ಬರೆದಿದ್ದು, ಅದು ಪ್ರಕಟವಾಗಿತ್ತೆಂದು ಕೂಡಲಿ ಚಿದಂಬರಂ ಮತ್ತು ವಿ.ಸೀತಾರಾಮಯ್ಯನವರು ಹೇಳಿದ್ದರು. ಆದರೆ ಅವರು ಸೂಚಿಸಿದ್ದ ಆಕರಗಳನ್ನೆಲ್ಲ ಶೋಧಿಸಿದರೂ ಪ್ರಯೋಜನವಾಗಲಿಲ್ಲ.

. 'ಎಂ.ಎ.ಪರೀಕ್ಷೆಗೊ ಏನೊ ಬಿ.ಎಂ.ಶ್ರೀ. ಬರೆದ ಒಂದು ಪ್ರೌಢ ಪ್ರಬಂಧ ಬ್ರೌನಿಂಗ್‌ನ 'ಪಿಪ್ಪಾ ಪಾಸಸ್' ಎಂಬ ಹೆಸರಿನ ಕವಿತಾ ನಾಟಕದ ಪ್ರಬಂಧದ ಅಚ್ಚಾದ ಪ್ರತಿಯಿದ್ದು ಈಗ ಸಿಕ್ಕದಾಗಿದೆ' ಎಂದು ವಿ. ಸೀತಾರಾಮಯ್ಯ 'ಶ್ರೀ ಸಾಹಿತ್ಯ' ಸಂಪುಟಕ್ಕೆ ಬರೆದ 'ಪರಿಚಯ ಕಾಣಿಕೆ' ಎಂಬ ಬರಹದಲ್ಲಿ ತಿಳಿಸಿದ್ದಾರೆ.

ಬಿ.ಎಂ.ಶ್ರೀ.ಯವರ ಹಲವಾರು ಪ್ರಕಟಿತ ಹಾಗೂ ಅಪ್ರಕಟಿತ ಬರಹಗಳು ಸಿಕ್ಕದಾಗಿದೆ ಎನ್ನುವ ತೀರ್ಮಾನ ಸತ್ಯ.

**೫. 'ಶ್ರೀಕಂಠಿಕೆ" (೧೯೮೪)**

ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಲ್ಲಿ ಸೃಜನಶೀಲತೆಯನ್ನು ಬೆಳೆಸುವ, ಕನ್ನಡದಲ್ಲಿ ಹೊಸ ಕಾವ್ಯವನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಬಿ.ಎಂ.ಶ್ರೀ ವಿಶ್ವವಿದ್ಯಾನಿಲಯಕ್ಕೆ ಒಂದು ದತ್ತಿಯನ್ನು ೧೯೨೭ರಲ್ಲಿ ನೀಡಿದರು. ಒಂದು ಸಾವಿರ ರೂಪಾಯಿಯ ದತ್ತಿಯದು.

ಅಂದಿನ ಮಹಾರಾಜರಾಗಿದ್ದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಅಧಿಕಾರವಹಿಸಿಕೊಂಡು ಇಪ್ಪತ್ತೈದು ವರ್ಷಗಳು ತುಂಬಿದ ನೆನಪಿಗಾಗಿ, ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಂದ ರಚಿತವಾದ ಕನ್ನಡದ, ಕನ್ನಡ ಛಂದಸ್ಸಿನ ಅತ್ಯುತ್ತಮ ನೀಳ್ಗವಿತೆಗೆ ಪ್ರತಿವರ್ಷ ಒಂದು ಬಂಗಾರದ ಅದು ಪದಕವನ್ನು ನೀಡಲು ವ್ಯವಸ್ಥೆ ಮಾಡಿದರು. ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ಗಳಿಂದ ಅಚ್ಚ ಕನ್ನಡ ಛಂದಸ್ಸಿನಲ್ಲಿ ರಚಿತವಾದ ಕನ್ನಡ ಪದ್ಯಕಾವ್ಯಕ್ಕೆ ಸಲ್ಲತಕ್ಕದ್ದಾಗಿದೆ. ಈ ಪದಕವನ್ನು ಸ್ಥಾಪಿಸಿದ್ದಕ್ಕಾಗಿ ಕನ್ನಡಿಗರ ಪರವಾಗಿ ಪ್ರಬುದ್ಧ ಕರ್ನಾಟಕ ಬಿ.ಎಂ.ಶ್ರೀಯವರನ್ನು ಅಭಿನಂದಿಸಿತು.

ಶ್ರೀ ರಜತೋತ್ಸವ ಸ್ವರ್ಣಪದಕಕ್ಕೆ ಸಂಬಂಧಿಸಿದ ಸಾಮಾನ್ಯ ನಿಯಮಗಳು ಹೀಗಿವೆ.

- ವಿಶ್ವವಿದ್ಯಾನಿಲಯಕ್ಕೆ ಸೇರಿದ ಕಾಲೇಜುಗಳಲ್ಲಿ (ಪದವಿ ಹಾಗೂ ಸ್ನಾತಕೋತ್ತರ ತರಗತಿಗಳಲ್ಲಿ) ವ್ಯಾಸಂಗ ಮಾಡುತ್ತಿರುವ, ಅತ್ಯುತ್ತಮ ಕನ್ನಡ ಪದ್ಯರಚನೆ ಮಾಡುವ ವಿದ್ಯಾರ್ಥಿಗಳಿಗೆ ಈ ಪದಕ ಸಲ್ಲುತ್ತದೆ.
- ಪದಕವನ್ನು ಪ್ರತಿವರ್ಷವೂ ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ ವಿತರಣೆ ಮಾಡಲಾಗುವುದು.
- ಪದ್ಯರಚನೆಯು ಶುದ್ಧವಾದ ಕನ್ನಡ ಛಂದಸ್ಸಿನಲ್ಲಿರಬೇಕು. (ಸಂಸ್ಕೃತದ ವೃತ್ತ, ಕಂದಗಳಲ್ಲಿರಬಾರದು)
- ರಚನೆಯು ಗ್ರಹಿಸಲು ಸುಲಭವಾಗಿರುವ ಆಧುನಿಕ ಕನ್ನಡ ಶೈಲಿಯಲ್ಲಿರಬೇಕು.
- ರಚನೆಯು ೩೦೦ ಸಾಲುಗಳನ್ನು ಮೀರದಂತಿರಬೇಕು.
- ಪದ್ಯಗಳು ಪೂರ್ಣ ಅರ್ಹತೆಯನ್ನು ಪಡೆಯದಿದ್ದರೆ ಅಥವಾ ಸ್ಪರ್ಧಿಗಳ ವ್ಯಕ್ತಿತ್ವದ ಅರ್ಹಮಟ್ಟವನ್ನು ತೋರದೆ ಹೋದರೆ ಬಹುಮಾನವನ್ನು ನೀಡಲಾಗುವುದಿಲ್ಲ.
- ಇದೇ ಸ್ಪರ್ಧೆಯಲ್ಲಿ ಒಮ್ಮೆ ಬಹುಮಾನ ಪಡೆದವರಿಗೆ ಇನ್ನೊಮ್ಮೆ ಸ್ಪರ್ಧಿಸಲು ಅವಕಾಶವಿಲ್ಲ.

**'ಶ್ರೀ' ರಜತೋತ್ಸವ ಸ್ವರ್ಣ ಪದಕವನ್ನು ಪಡೆದವರು :**

- 'ಕುಮುದಿನಿ' ಎಂಬ ವರ್ಡ್ಸ್‌ವರ್ತ್ ಕವಿಯ Landamia ಎಂಬ ಕವಿತೆಯನ್ನು ಆಧರಿಸಿದ ನೀಳ್ಗವಿತೆ–**ಕುವೆಂಪು**
- ಸೊಹ್ರಾಬ್ ಮತ್ತು ರುಸ್ತುಂ–**ಎಲ್. ಗುಂಡಪ್ಪ**
- ತಾರೆ–**ಜಿ.ಪಿ.ರಾಜರತ್ನಂ**
- ಆ ಚಿತ್ರಗಳು–**ಎಂ.ವಿ. ಸೀತಾರಾಮಯ್ಯ**
- ಮಾಚಯ್ಯ–**ಎಸ್.ವಿ. ಪರಮೇಶ್ವರ ಭಟ್ಟ**
- ಅಶೋಕನ ವಿಜಯ–**ಕೆ. ನರಸಿಂಹಮೂರ್ತಿ**
- ಒಳತೋಟಿ–**ಎಂ. ಗೋಪಾಲಕೃಷ್ಣ ಅಡಿಗ**
- ಓಬವ್ವ–**ಜಿ. ವರದರಾಜರಾವ್**
- ಬಾಡದ ಹೂವು–**ಎಸ್. ಅನಂತನಾರಾಯಣ**
- ಚಿರದುಃಖಿ–**ಎಂ.ಎಸ್. ಬಾಬು**
- ಭದ್ರಾವರ–**ಬಿಳಿಗಿರಿ**

- ಬೀಳ್ಕೊಡಿಗೆ–ಜಿ.ಎಸ್. ಶಿವರುದ್ರಪ್ಪ
- ಆಹುತಿ–ಎಚ್.ಎಂ. ಮರುಳಸಿದ್ಧಯ್ಯ
- ಬಾಡಿದ ಹೂ–ಶಿವಮೂರ್ತಿ
- ಕೊನೆಯುಸಿರು–ಎಂ. ಚೆನ್ನಪ್ಪ
- ಅನಾದಿ ಅನಂತ–ಸಿ.ಪಿ.ಕೆ.
- ಪ್ರಬುದ್ಧ ಪ್ರಣಯ–ಹೊಸಬೆಟ್ಟು ಸೀತಾರಾಮಾಚಾರ್
- ಪಟಾಚಾರ–ಗುಂಡಿ ಚಂದ್ರಶೇಖರ ಐತಾಳ
- ಹರಿವು–ಕುಂಭಾಸಿ ವಿಶ್ವಂಭರ ಉಪಾಧ್ಯಾಯ
- ತೆಪ್ಪೋತ್ಸವ– ನಂಜುಂಡಶಾಸ್ತ್ರೀ

ಶ್ರೀ ರಜತೋತ್ಸವ ಸ್ವರ್ಣಪದಕ ಪಡೆದ ಎಲ್ಲಾ ಕವಿತೆಗಳನ್ನು ಕವಿಗಳ ಪರಿಚಯದೊಂದಿಗೆ ೧೯೮೮ರಲ್ಲಿ 'ಶ್ರೀಕಂಠಿಕೆ' ಎಂಬ ಸಂಪುಟದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ 'ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿತು. ಆ ಸಂಸ್ಥೆಯ ನಿವೃತ್ತ ಪ್ರಾಧ್ಯಾಪಕರಾಗಿದ್ದ ಶ್ರೀ ಎನ್.ಎಸ್. ತಾರಾನಾಥ್ ಈ ಸಂಕಲನವನ್ನು ಸಂಪಾದಿಸಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದ ಡಾ। ಹಾ. ಮಾ. ನಾಯಕರು ಮುನ್ನುಡಿ ಬರೆದಿದ್ದಾರೆ.

ಕನ್ನಡದಲ್ಲಿ ಇಷ್ಟು ದೊಡ್ಡ ನೀಳ್ಗವಿತೆಗಳ ಸಂಕಲನ ಪ್ರಕಟವಾಗಿದ್ದು ಇದೇ ಮೊದಲು.

**೬. "ಶ್ರೀ ಉತ್ಸವ" (೧೯೮೬)**

ಬಿ.ಎಂ.ಶ್ರೀ.ಯವರ ಮೊಮ್ಮಗಳು ಶ್ರೀಮತಿ ವಿಶಾಲಾಕ್ಷಿ ತಾತನ ಜನ್ಮ ಶತಮಾನೋತ್ಸವದ ನೆನಪಿನಲ್ಲಿ 'ಶ್ರೀ ಉತ್ಸವ' ಎಂಬ ಗ್ರಂಥವನ್ನು ಸಂಪಾದಿಸಿದರು. ಈ ಗ್ರಂಥವನ್ನು 'ಕನ್ನಡ ನವೋದಯದ ಆಚಾರ್ಯ ಪುರುಷ ಬಿ.ಎಂ.ಶ್ರೀಕಂಠಯ್ಯನವರಿಗೆ ಪ್ರೀತಿ ವಿಶ್ವಾಸ ಗೌರವಗಳ ಕಾಣಿಕೆಯಾಗಿ ಅರ್ಪಿಸಲಾಯಿತು.' ಎಪ್ಪತ್ತು ವರ್ಷ ತುಂಬಿದ ಕನ್ನಡ ಸಾಹಿತ್ಯ ಪರಿಷತ್ತು 'ಅಮೃತೋತ್ಸವ ಮಾಲೆ' ಎಂಬ ಹೆಸರಿನಿಂದ ಸಾಂಕೇತಿಕವಾಗಿ ಎಪ್ಪತ್ತು ಮೌಲಿಕ ಗ್ರಂಥಗಳನ್ನು ಕರ್ನಾಟಕ ಸರ್ಕಾರದ ಸಹಾಯದಿಂದ ಪ್ರಕಟಿಸಿತು. ಈ ಮಾಲೆಯ ಏಳನೆಯ ಕೃತಿಯಾಗಿ ಇಂತಪ್ಪನ್ ಇನ್ನಿಲ್ಲ ಎಂಬಂತೆ ಬಾಳಿದ 'ಶ್ರೀ'ಯವರನ್ನು ಕುರಿತು ಲೇಖನಗಳಿರುವ 'ಶ್ರೀ ಉತ್ಸವ' ಪುಸ್ತಕ ಅವರ ಹೆಸರನ್ನೇ ಹೊತ್ತು ನಿಂತಿರುವ ಬಿ.ಎಂ.ಶ್ರೀ. ಅಚ್ಚುಕೂಟದಿಂದಲೇ ಮುದ್ರಣವಾಗಿ ೧೯೮೬ ನೇ ಇಸವಿ ಮೇ ೫ ನೇ ತಾರೀಖು ಲೋಕಾರ್ಪಣೆಯಾಯಿತು.

ಈ ಗ್ರಂಥದಲ್ಲಿ ಬಿ.ಎಂ.ಶ್ರೀ.ಯವರ ಶಿಷ್ಯರು, ಅಭಿಮಾನಿಗಳು, ಬಂಧುಗಳು ಅವರ ಬದುಕು ಮತ್ತು ಬರಹ ಕುರಿತು ಬರೆದಿರುವ ಲೇಖನಗಳಿವೆ. ಅವರ ಪಾಂಡಿತ್ಯ, ವ್ಯಕ್ತಿತ್ವದ ಪರಿಚಯ, ಸಾಹಿತ್ಯ ಸಂಘ ಸಂಸ್ಥೆಗಳ ಒಡನಾಟ, ಸಿದ್ಧಿ ಸಾಧನೆಗಳನ್ನು ಆ ಲೇಖನಗಳು ಪರಿಚಯ ಮಾಡಿಕೊಡುತ್ತವೆ. ಅವರ ಸಾಹಿತ್ಯದ ವಿಮರ್ಶೆಯಿದೆ. ಒಟ್ಟು ಎಂಭತ್ತು ಲೇಖನಗಳು, ತೊಂಭತ್ತೂರು ಭಾವಚಿತ್ರಗಳಿರುವ 'ಶ್ರೀ ಉತ್ಸವ'ದ ಬೆಲೆ ನಲವತ್ತು ರೂಪಾಯಿಗಳು, ಆಗ ಪರಿಷತ್ತಿನ ಅಧ್ಯಕ್ಷರಾಗಿದ್ದವರು ಡಾ: ಹಂಪ ನಾಗರಾಜಯ್ಯ.

**೭. 'ಶ್ರೀ ಸಾಹಿತ್ಯ ಮಣಿಮಾಲೆ' : (೨೦೦೮)**

ಈ ಕೃತಿ 'ಶ್ರೀ ಸಾಹಿತ್ಯ'ದ ಮುಂದುವರಿದ ಕೃತಿ ಸಂಪುಟವಾಗಿ 'ಶ್ರೀ'ಯವರ ೧೨೫ ನೇ ಜನ್ಮ ದಿನೋತ್ಸವದಂದು ೩-೧-೨೦೦೮ ರಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನದ ಸಭಾಂಗಣದಲ್ಲಿ ಲೋಕಾರ್ಪಣೆಯಾಯಿತು. ಪ್ರತಿಷ್ಠಾನದ ಅಧ್ಯಕ್ಷರಾಗಿದ್ದ ಜೆ.ಶ್ರೀನಿವಾಸರಾಜು ಅವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭವದು. ಇನ್ನೂರು ನಲವತ್ತಾರು ಪುಟಗಳಿರುವ ಈ ಗ್ರಂಥದ ಬೆಲೆ ನೂರ ಐವತ್ತು ರೂಪಾಯಿಗಳು.

'ಶ್ರೀ ಸಾಹಿತ್ಯ ಮಣಿಮಾಲೆ' ಗ್ರಂಥದ ಸಂಪಾದಕರು ಡಾ. ಟಿ.ವಿ.ವೆಂಕಟಾಚಲಶಾಸ್ತ್ರಿಗಳು. ಬಿ.ಎಂ.ಶ್ರೀ.ಯವರ ಅಪ್ರಕಟಿತ ಬರಹಗಳ ಸಂಗ್ರಹ ಕಾರ್ಯಕ್ಕೆ ನೆರವಾದವರು. ಜೆ.ಶ್ರೀನಿವಾಸರಾಜು ಮತ್ತು ಎನ್.ವಿ.ರಾಧಾಕೃಷ್ಣ. ಈ ಗ್ರಂಥದಲ್ಲಿ ನಾಲ್ಕು ಮುಖ್ಯವಾದ ಭಾಗಗಳಿವೆ.

೧. ಲೇಖನಗಳು, ಭಾಷಣಗಳು, ಭಾಷಣಗಳ ವರದಿಗಳು. ('ಶ್ರೀ ಸಾಹಿತ್ಯ'ದಲ್ಲಿ ಸೇರ್ಪಡೆಯಾಗದ ಭಾಷಣಗಳು. ಇಂಗ್ಲಿಷ್ ಮತ್ತು ಕನ್ನಡದ ಲೇಖನಗಳು)
೨. 'ಕನ್ನಡ ನುಡಿ' ವಾರಪತ್ರಿಕೆಗೆ ಬಿ.ಎಂ.ಶ್ರೀ ಫೆಬ್ರವರಿ ೧೯೪೨ ರಿಂದ ಡಿಸೆಂಬರ್ ೧೯೪೨ ರವರೆಗೆ ಸಂಪಾದಕರಾಗಿದ್ದಾಗ ಬರೆದ ಸಂಪಾದಕೀಯಗಳು.
೩. ಮುನ್ನುಡಿಗಳು, ಸಂದೇಶಗಳು
೪. ನಾಡುನುಡಿಯ ಪ್ರಚಾರಕ್ಕಾಗಿ ನಾಡಿನಾದ್ಯಂತ ಸಂಚರಿಸಿ ಭಾಷಣಗಳನ್ನು ಮಾಡಿದ ಸಂದರ್ಭಗಳಲ್ಲಿ ಅವರಿಗೆ ಸನ್ಮಾನಗಳಾದವು. ಭಿನ್ನವತ್ತಳೆಗಳನ್ನು ಸಮರ್ಪಿಸಲಾಯಿತು. ಆಗವರು ಮಾಡಿದ ಭಾಷಣಗಳನ್ನು ಪ್ರಕಟಿಸಲಾಗಿದೆ.

ಈ ಗ್ರಂಥದಲ್ಲಿ ಮೇಲ್ಕಂಡ ನಾಲ್ಕು ಭಾಗಗಳಲ್ಲದೆ 'ಶ್ರೀ' ಯವರ ಭಾಷಣಗಳ

ಉಲ್ಲೇಖಗಳ ಒಂದು ಅನುಬಂಧ ಮತ್ತು ಅವರ ಹಸ್ತಾಕ್ಷರದ ಕೆಲವು ಮಾದರಿ ಪುಟಗಳಿವೆ.

## ಬಿ.ಎಂ.ಶ್ರೀ : ೨. ಸಂಚಿಕೆಗಳ ಕಾಣಿಕೆ

**೧. ಶ್ರೀನಿಧಿ :** (೧೯೮೪) ಬಿ.ಎಂ.ಶ್ರೀ. ಸ್ಮಾರಕ 'ಪ್ರತಿಷ್ಠಾನ' ೧೯೮೪ ರಲ್ಲಿ ಅವರ ಜನ್ಮ ಶತಮಾನೋತ್ಸವ ಸಮಾರಂಭವನ್ನು ಆಚರಿಸಿದ ಸಂದರ್ಭದಲ್ಲಿ 'ಶ್ರೀನಿಧಿ' ಎಂಬ ಸಂಚಿಕೆಯನ್ನು ಹೊರತಂದಿತು. ಈ ಸಂಚಿಕೆಯಲ್ಲಿ ಕುವೆಂಪು, ಎ.ಎನ್.ಮೂರ್ತಿರಾವ್, ಪು.ತಿ.ನರಸಿಂಹಾಚಾರ್, ಡಿ.ವಿ.ಗುಂಡಪ್ಪ ನಾ.ಕಸ್ತೂರಿ ಮೊದಲಾದವರ ಲೇಖನಗಳು ಪ್ರಕಟವಾಗಿವೆ. ನಾನ್ನೂರು ಮೂವತ್ತೆರಡು ಪುಟಗಳಿರುವ ಈ ಸಂಚಿಕೆಯ ಪ್ರಧಾನ ಸಂಪಾದಕರು ಜಿ.ಎಸ್.ಶಿವರುದ್ರಪ್ಪನವರು.

**೨. ರಜತಸಿರಿ :** (೧೯೭೯-೨೦೦೪) 'ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ' ಸಂಸ್ಥೆಯ ರಜತ ಮಹೋತ್ಸವದ (೧೯೭೯-೨೦೦೪) ಸವಿನೆನಪಿನಲ್ಲಿ 'ರಜತ ಸಿರಿ' ಎಂಬ ಸಂಚಿಕೆಯನ್ನು ಹೊರತಂದಿತು. ಅದರ ಸಂಪಾದಕರು ಎಸ್.ವಿ.ಶ್ರೀನಿವಾಸರಾವ್ ಮತ್ತು ಪ್ರೊ.ನಾ.ಗೀತಾಚಾರ್ಯರು. ಈ ಸಂಚಿಕೆಯಲ್ಲಿ ಸಂಸ್ಥಾಪಕ ವಿ.ಸೀತಾ ರಾಮಯ್ಯ ಮತ್ತು ಬಿ.ಎಂ.ಶ್ರೀ. ಕುರಿತ ಕವನಗಳು, ಲೇಖನಗಳು, ಸಂಸ್ಥೆ ನಡೆದು ಬಂದ ದಾರಿ, ಸಾಧನೆ ಮತ್ತಿತರ ವಿಚಾರಪೂರಿತ ಲೇಖನಗಳಿವೆ.

## ಬಿ.ಎಂ.ಶ್ರೀ : ೩. ಸ್ಮಾರಕಗಳ ಕಾಣಿಕೆ

### ೧. "ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ"

೧೯೭೯ ನೇ ಇಸವಿ ಮೇ ತಿಂಗಳು ಆರನೆಯ ತಾರೀಖು ಬೆಂಗಳೂರಿನಲ್ಲಿ 'ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ' ಸ್ಥಾಪಿಸಲ್ಪಟ್ಟರೂ ೧೦-೩-೧೯೮೦ ರಲ್ಲಿ ಸೋಮವಾರ ಬೆಳಿಗ್ಗೆ ೧೦ ಘಂಟೆಗೆ ಜನ್ಮ ತಾಳಿತು ಎಂದು ಹೇಳಬಹುದು. ಈ ಸಾಹಿತ್ಯ ಸಂಸ್ಥೆಯ ಸ್ಥಾಪಕರು ಖ್ಯಾತ ಸಾಹಿತಿ, ಸಂಶೋಧಕ, ಪ್ರಬಂಧಕಾರ, ವ್ಯಾಕರಣಕಾರ, ವಿದ್ವಾಂಸ ಪ್ರೊ. ಎಂ.ವಿ.ಸೀತಾರಾಮಯ್ಯ. ಬಿ.ಎಂ.ಶ್ರೀ.ಯವರ ಕೆಲವು ಶಿಷ್ಯರ, ಮಿತ್ರರ ಸಹಾಯದಿಂದ ಈ ಸಂಶೋಧನಾ ಸಂಸ್ಥೆಯನ್ನು ಹುಟ್ಟುಹಾಕಿದರು.

ಹಲವಾರು ಘನ ಉದ್ದೇಶಗಳನ್ನು ಗುರಿಯಾಗಿಟ್ಟುಕೊಂಡು ಸ್ಥಾಪಿಸಲಾದ ಈ ಸಂಶೋಧನಾ ಕೇಂದ್ರದ ಉದ್ಘಾಟನಾ ಸಮಾರಂಭ ಬೆಂಗಳೂರಿನಲ್ಲಿರುವ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಭಾಂಗಣದಲ್ಲಿ ಬಿ.ಎಂ.ಶ್ರೀ.

ಯವರ 'ಕರುಣಾಳು ಬಾ ಬೆಳಕೆ' ಎಂಬ ಪ್ರಾರ್ಥನಾ ಪದ್ಯದೊಂದಿಗೆ ಪ್ರಾರಂಭವಾಯಿತು. ಸಂಸ್ಥೆಯ ಅಧ್ಯಕ್ಷರಾಗಿದ್ದ ನಿಟ್ಟೂರು ಶ್ರೀನಿವಾಸರಾವ್ ಸ್ವಾಗತ ಭಾಷಣ ಮಾಡಿದರೆ, ಎಂ.ವಿ.ಸೀತಾರಾಮಯ್ಯ ಪ್ರತಿಷ್ಠಾನದ ಗುರಿಗಳನ್ನು ವಿವರಿಸಿ ಸರ್ಕಾರ ಮತ್ತು ಸಾರ್ವಜನಿಕರು ನೆರವು ನೀಡಿ ಸಂಸ್ಥೆಯನ್ನು ಬೆಳೆಸಬೇಕೆಂದು ಭಿನ್ನವಿಸಿಕೊಂಡರು.

ಡಾ। ಕುವೆಂಪು ಅಂದು ಬಿ.ಎಂ.ಶ್ರೀಯವರ ಭಾವಚಿತ್ರವನ್ನು ಅನಾವರಣಗೊಳಿಸಿ ದೀಪ ಬೆಳಗಿಸುವುದರ ಮೂಲಕ ಉದ್ಘಾಟನೆ ಮಾಡಿ, ಭಕ್ತಿ ಗೌರವಗಳಿಂದ ಭಾವಚಿತ್ರಕ್ಕೆ ನಮಸ್ಕರಿಸಿದರು. ಅಧ್ಯಕ್ಷರಾಗಿದ್ದ ಮಾಸ್ತಿ ವೆಂಕಟೇಶ ಐಯ್ಯಂಗಾರ್ ನಾರಾಯಣದಾಸರ 'ಕೀರ್ತನೆ ಕುಸುಮಾಂಜಲಿ' ಎಂಬ ಗ್ರಂಥವನ್ನು ಲೋಕಾರ್ಪಣೆ ಮಾಡಿದರು.

ಶೃಂಗೇರಿ ಶಾರದಾಪೀಠದ ಶ್ರೀ ಜಗದ್ಗುರುಗಳು ಆಶೀರ್ಮಂತ್ರಾಕ್ಷತೆಯನ್ನು ಪ್ರತಿಷ್ಠಾನಕ್ಕೆ ಕಳುಹಿಸಿ ಅನುಗ್ರಹಿಸಿದರು. ಸಮಾರಂಭಕ್ಕೆ ಬಿ.ಎಂ.ಶ್ರೀ.ಯವರ ಶಿಷ್ಯರು, ಮಿತ್ರರು, ಗಣ್ಯರು, ಬಂಧುಗಳು ಅಭಿಮಾನಿಗಳು, ಅಪಾರ ಸಂಖ್ಯೆಯಲ್ಲಿ ಆಗಮಿಸಿ ಪ್ರತಿಷ್ಠಾನದ ಪ್ರಗತಿಯಲ್ಲಿ ತಮಗಿರುವ ಪ್ರೀತಿ, ಗೌರವಗಳನ್ನು ವ್ಯಕ್ತಪಡಿಸಿದರು.

ಪ್ರತಿಷ್ಠಾನದೊಂದಿಗೆ ಪ್ರಾಚೀನ ಹಸ್ತಪ್ರತಿಗಳ ಭಂಡಾರವನ್ನೂ ಸ್ಥಾಪಿಸಲಾಯಿತು. ಈಗ ಅಲ್ಲಿ ೧೫೦೦ಕ್ಕಿಂತ ಅಧಿಕ ಸಂಖ್ಯೆಯ ಓಲೆಗರಿಗಳಿವೆ. ಅಮೂಲ್ಯವಾದ ಹಸ್ತಪ್ರತಿಗಳಿವೆ, ಸಾವಿರಾರು ಗ್ರಂಥಗಳಿವೆ. ವೈಜ್ಞಾನಿಕ ವಿಧಾನಗಳಿಂದ ಓಲೆಗಳು, ಗ್ರಂಥಗಳು, ಕಾಗದದ ಹಸ್ತಪ್ರತಿಗಳನ್ನು ನಾಶವಾಗದಂತೆ ರಕ್ಷಿಸಲಾಗುತ್ತಿದೆ. ವಿದ್ಯಾರ್ಥಿಗಳಿಗೆ ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ, ಸಂಪ್ರತಿ, ದಾಖಲೀಕರಣ ಮತ್ತು ಗ್ರಂಥ ಸಂಪಾದನೆಯ ಕೌಶಲದಲ್ಲಿ ಪರಿಣತಿಯನ್ನು ನೀಡಲಾಗುತ್ತಿದೆ. ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿ, ಲಕ್ಷಣ ಗ್ರಂಥಗಳನ್ನು ರಚಿಸಿ ಪ್ರಕಟಿಸುತ್ತಿದೆ.

ಪ್ರತಿಷ್ಠಾನ ವಿದ್ವಾಂಸರ ಶತಮಾನೋತ್ಸವಗಳನ್ನು, ವಿಚಾರಗೋಷ್ಠಿ, ಉಪನ್ಯಾಸಗಳನ್ನು ಏರ್ಪಡಿಸುತ್ತಿದೆ. ಸಾಹಿತ್ಯ ಮತ್ತು ಸಂಗೀತ ಸ್ಪರ್ಧೆಗಳನ್ನು ೧೯೯೦ ರಿಂದ ಹಸ್ತಪ್ರತಿ ಶಾಸ್ತ್ರ ತರಗತಿಗಳನ್ನು ನಡೆಸಲಾಗುತ್ತಿದೆ. ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ನೂತನ ಪಾಠದೊಂದಿಗೆ ಸಂಪಾದಿಸಿ ಪ್ರಕಟಿಸಲಾಗುತ್ತಿದೆ.

೧೯೮೭ ರಲ್ಲಿ ಪ್ರತಿಷ್ಠಾನ 'ಕರ್ನಾಟಕ ಲೋಚನ' ಎಂಬ ಅರ್ಧ ವಾರ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿತು. ಈ ಪತ್ರಿಕೆ ಸಂಶೋಧನೆಗಳಿಗೆ, ವಿದ್ವತ್ತಿಗೆ

ಮೀಸಲಾಗಿದ್ದು ಕರ್ನಾಟಕದ ಏಕೈಕ ಸಂಶೋಧನಾ ಪತ್ರಿಕೆಯೆನಿಸಿದೆ. ೨೦೧೫ ರ ಫೆಬ್ರವರಿ ೧೪ ನೇ ತಾರೀಖು 'ಹೊಂಗನಸು' ಎಂಬ ಎಂಟು ಪುಟಗಳ ಮಾಸಿಕ ಪತ್ರಿಕೆಯೊಂದು ಪ್ರಾರಂಭಿಸಲ್ಪಟ್ಟು ಪ್ರತಿಷ್ಠಾನದ ಚಟುವಟಿಕೆಗಳನ್ನು ವರದಿ ಮಾಡುತ್ತಿದೆ, ದಿವಂಗತ ಖ್ಯಾತ ಸಾಹಿತಿಗಳ ಪರಿಚಯ ಮಾಡಿಕೊಡುತ್ತಿದೆ. ಇತ್ತೀಚೆಗೆ ಹಳೆಗನ್ನಡ ಮತ್ತು ಶಾಸನ ಲಿಪಿ-ಕಲಿಕೆ ತರಗತಿಗಳನ್ನು ಪ್ರಾರಂಭಿಸಿದೆ. ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ 'ಕರ್ನಾಟಕ ಲೋಚನ' ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ ಸಂಶೋಧನಾತ್ಮಕ ಲೇಖನ ಗಳನ್ನು ವಿದ್ವಾಂಸರಿಂದ ಆಹ್ವಾನಿಸಲಾಗಿದೆ.

ಒಂದು ಸಂಸ್ಥೆಯನ್ನು ಅದರಲ್ಲೂ ಸಾಹಿತ್ಯ ಪ್ರಧಾನವಾದ ಸಂಸ್ಥೆಯನ್ನು ಕಟ್ಟುವುದು ಸುಲಭದ ಕಾಯಕವಲ್ಲ. ಕಟ್ಟಿದ ಮೇಲೆ ಅದನ್ನು ಯಶಸ್ವಿಯಾಗಿ ಚಿರಕಾಲ ಉಳಿಯುವಂತೆ ನಿರಂತರವಾಗಿ ನಡೆಸಿಕೊಂಡು ಹೋಗುವುದು ನಿಜಕ್ಕೂ ಹಲವಾರು ಆಸಕ್ತರ ಶ್ರಮದ ಪ್ರತಿಫಲ. ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರ ನೆರವು, ಸಲಹೆ, ಸೂಚನೆ ಹಾಗೂ ನಿಷ್ಕಲ್ಮಶ ಸೇವೆ ಪ್ರತಿಷ್ಠಾನದ ಬೆನ್ನೆಲಬೆನ್ನಬಹುದು. ಅಧ್ಯಕ್ಷರಾಗಿದ್ದ ಎಲ್.ಎಸ್.ಶೇಷಗಿರಿರಾವ್, ಎನ್. ಬಸವಾರಾಧ್ಯ, ಡಾ। ಟಿ.ವಿ.ವೆಂಕಟಾಚಲಶಾಸ್ತ್ರಿ ಮತ್ತಿತರರು ಪ್ರತಿಷ್ಠಾನದ ಬೆಳವಣಿಗೆಗೆ ಕಾರಣರೆನ್ನಬಹುದು. ಪ್ರತಿಷ್ಠಾನಕ್ಕೆ ಆರ್ಥಿಕ ನೆರವು ನೀಡಿದವರು ಕೇಂದ್ರ ಮಂತ್ರಿಗಳಾಗಿದ್ದ ಅನಂತಕುಮಾರ್, ರಾಜ್ಯಮಂತ್ರಿಗಳಾಗಿದ್ದ ರಾಮಕೃಷ್ಣ ಹೆಗ್ಗಡೆ, ವೀರೇಂದ್ರ ಹೆಗ್ಗಡೆ ಮುಂತಾದವರು.

೨೦೦೩ ನೇ ಇಸವಿ ಮೇ ೬ ನೇ ತಾರೀಖು ಪ್ರತಿಷ್ಠಾನದ ರಜತೋತ್ಸವದ ಸಮಾರಂಭವನ್ನು ಅದ್ದೂರಿಯಿಂದ ಆಚರಿಸಲಾಯಿತು. ಆ ಸಂದರ್ಭದಲ್ಲಿ 'ರಜತಸಿರಿ' ಎಂಬ ಸ್ಮರಣ ಸಂಚಿಕೆಯನ್ನು ಪ್ರಕಟಿಸಲಾಯಿತು. ನಿರ್ಮಾಣ ಹಂತದಲ್ಲಿದ್ದ ಬಿ.ಎಂ.ಶ್ರೀ ಕಲಾಭವನ ಪೂರ್ಣಗೊಂಡು 'ರಜತ ಮಹಡಿ' ಎನ್ನುವ ಹೆಸರು ಪಡೆಯಿತು.

**೨. ಬಿ.ಎಂ.ಶ್ರೀ ಪ್ರತಿಷ್ಠಾನದ ಶಾಖಾ ಕಛೇರಿ, 'ಬಿ.ಎಂ.ಶ್ರೀ. ಶತಮಾನ ಭವನ'ಬೆಳ್ಳೂರು**

ಬಿ.ಎಂ.ಶ್ರೀ.ಯವರ ತಂದೆಯ ವಂಶಸ್ಥರು ವಾಸ ಮಾಡುತ್ತಿದ್ದ ಬೆಳ್ಳೂರಿನಲ್ಲಿರುವ ಮನೆಯನ್ನು ಮಂಡ್ಯ ಜಿಲ್ಲಾ ಪಂಚಾಯಿತಿ ತನ್ನ ಸ್ವಾಧೀನಕ್ಕೆ ಪಡೆದು ಆ ಮನೆಯನ್ನು ಕೆಡವಿ ನಿವೇಶನದಲ್ಲಿ ಭೂಸೇವಾನಿಗಮ ಆರು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಮಹಡಿ ಮನೆಯನ್ನು ನಿರ್ಮಿಸಿತು.

೩-೧೧-೧೯೮೫ ನೇ ತಾರೀಖು ಆ ನಿವೇಶನದಲ್ಲಿ 'ಆಚಾರ್ಯ ಬಿ.ಎಂ.ಶ್ರೀ. ಶತಮಾನ ಭವನ'ದ ಶಂಕುಸ್ಥಾಪನೆಯ ಸಮಾರಂಭ ಎಂ.ವಿ.ಸೀತಾ ರಾಮಯ್ಯನವರ ಅಧ್ಯಕ್ಷತೆಯಲ್ಲಿ ನೆರವೇರಿತು. ಆ ಸಮಾರಂಭದಲ್ಲಿ ಭಾಗವಹಿಸಿದ್ದ ವರು ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎ.ಎನ್.ಮೂರ್ತಿರಾವ್, ಬಿ.ಎಂ.ಶ್ರೀ ಸಹೋದರ ಬಿ.ಎಂ. ಶಿವರಾಮಯ್ಯ, ಮೊಮ್ಮಗಳು ಶ್ರೀಮತಿ ವಿಶಾಲಾಕ್ಷಿ ಮತ್ತಿತರರು.

೧೩-೬-೧೯೯೪ರಲ್ಲಿ ಎ.ಎನ್.ಮೂರ್ತಿರಾಯರಿಂದ ಭವನದ ಉದ್ಘಾಟನೆ ಯಾಯಿತು. ಆಗ ಮಹಾಪೋಷಕರಾಗಿದ್ದವರು ಶ್ರೀ ಶ್ರೀ ಶ್ರೀ ಬಾಲಗಂಗಾಧರ ನಾಥ ಸ್ವಾಮೀಜಿಯವರು.

ಈ ಭವನದ ಮೊದಲನೆಯ ಅಂತಸ್ತಿನಲ್ಲಿ 'ಬಿ.ಎಂ.ಶ್ರೀ' ಸಭಾಂಗಣವಿದ್ದು ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ. ಎರಡನೆಯ ಅಂತಸ್ತಿನಲ್ಲಿ ಶ್ರೀ ವಸ್ತು ಸಂಗ್ರಹಾಲಯ ಮತ್ತು ಗ್ರಂಥಾಲಯವಿದೆ. ೩-೧-೧೯೯೫ ರಲ್ಲಿ ಗ್ರಂಥಾಲಯದ ಉದ್ಘಾಟನೆಯಾಯಿತು.



ಭಾಗ-೬

# ಬಿ.ಎಂ.ಶ್ರೀ : ಗುರುಸ್ಮರಣೆ

**೧. ಡಿ.ವಿ. ಗುಂಡಪ್ಪ : ೭-೩-೧೮೮೭ ೭-೧೦-೧೯೭೫**

ತಿಳಿವೇ ಬೆಳಕು ಎಂದು ನಂಬಿದ್ದ ಬಿ.ಎಂ.ಶ್ರೀ.ಯವರು ಪೂರ್ವದಿಂದ ಬಂದಿರುವ ಗ್ರಂಥಗಳನ್ನು ಓದಿಕೊಂಡು ಭಾಷೆಗೆ ಸಂಬಂಧಪಟ್ಟ ನಿಘಂಟು, ವ್ಯಾಕರಣ, ಛಂದಸ್ಸು ಮೊದಲಾದ ಶಾಸ್ತ್ರಗಳನ್ನು ಚೆನ್ನಾಗಿ ತಿಳಿದುಕೊಂಡು ಒಳ್ಳೆಯ ಪಾಂಡಿತ್ಯ ಸಂಪಾದಿಸಿದ್ದರು. ಪೂರ್ವಕಾಲದ ಶಿಲಾಶಾಸನಗಳನ್ನು, ತಾಮ್ರ ಶಾಸನಗಳನ್ನು ವ್ಯಾಸಂಗ ಮಾಡಿದ್ದರು. ಇನ್ನೂ ಅಚ್ಚಾಗದ ತಾಳೆಯೋಲೆಗಳಲ್ಲಿ ನಿಂತಿದ್ದ ಪುರಾತನ ಗ್ರಂಥಗಳನ್ನೆಲ್ಲ ಪರಿಶೀಲಿಸಿದ್ದರು. ಕನ್ನಡದ ಜೊತೆಗೆ ತಮಿಳು, ಸಂಸ್ಕೃತವನ್ನೂ ಕಲಿತರು. ಇಂಗ್ಲಿಷ್ ಭಾಷೆಯಲ್ಲಂತೂ ಪೂರ್ಣ ವಿದ್ವಾಂಸರಾಗಿದ್ದರು. ಇಂಗ್ಲಿಷ್ ಭಾಷೆಗೆ ಗುರುವಿನಂತಿದ್ದ ಗ್ರೀಕ್‌ಭಾಷೆಯನ್ನು ಅಭ್ಯಾಸ ಮಾಡಿಕೊಂಡರು. ಹೀಗೆ ಅವರು ಬಹು ಭಾಷೆಯಲ್ಲಿ ಪಂಡಿತರಾಗಿದ್ದರು. ಈ ಭಾಷಾಜ್ಞಾನದ ಫಲವೇನೆಂದರೆ ಕನ್ನಡ ಹೇಗೆ ಬೆಳೆಯಬೇಕೆಂಬುದನ್ನು ನಿಶ್ಚಯ ಮಾಡುವ ಶಕ್ತಿ, ಕನ್ನಡದಲ್ಲಿ ಪದಗಳು ಹೇಗಿರಬೇಕು, ವಾಕ್ಯದ ಧಾಟಿ ಹೇಗಿರಬೇಕು, ಗ್ರಂಥದ ರಚನೆ ಹೇಗಿರಬೇಕು ಎಂಬ ವಿಚಾರದಲ್ಲೂ ಅವರು ಹೇಳಿದ ತೀರ್ಮಾನವೇ ಕಡೆಯ ತೀರ್ಮಾನವಾಗಿತ್ತು.

ಅವರು ಕನ್ನಡದಲ್ಲಿ ಸ್ವತಃ ಸೊಗಸಾದ ಹಾಡುಗಳನ್ನು, ಪದ್ಯಗಳನ್ನು ನಾಟಕಗಳನ್ನು ಬರೆದು ಮೇಲ್ಪಂಕ್ತಿ ಹಾಕಿಕೊಟ್ಟರು. ಇತರರಿಂದ ಗ್ರಂಥ ಬರೆಸಿ ಅದನ್ನು ತಿದ್ದಿ ಸರಿಪಡಿಸಿ ಪ್ರಕಟಗೊಳಿಸಿದರು. ಕನ್ನಡ ಗ್ರಂಥಕರ್ತರನ್ನು ಪ್ರೋತ್ಸಾಹಿಸಿ ಸಹಾಯಧನವನ್ನು ನೀಡುತ್ತಿದ್ದರು.

ವಿದ್ವತ್ತಿನಿಂದ, ಬುದ್ಧಿಶಕ್ತಿಯಿಂದ, ವಾಗ್ಮಿಕೆಯಿಂದ ಕನ್ನಡಿಗರ ಏಳಿಗೆಗೋಸ್ಕರ ದುಡಿದ ಬಿ.ಎಂ.ಶ್ರೀ. ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡಕ್ಕಾಗಿ ಬಹುಮಾನದ

ದತ್ತಿಗಳನ್ನೂ ಸ್ಥಾಪಿಸಿದರು. ಅವರು ಸರಸಿಗಳು, ಸ್ನೇಹಪ್ರಿಯರು, ನಿರ್ಮಲವಾದ ಜೀವನ ನಡೆಸಿದವರು. ಶಾಂತ, ಮೃದು ಸ್ವಭಾವದವರು, ಕನ್ನಡ ಬಳಗಕ್ಕೇ ಹಿರಿಯರಾಗಿದ್ದ ಗುರು ಸಮಾನರಾಗಿದ್ದರು. ಅವರನ್ನು ನಾವು ಮರೆಯದೆ ಅವರು ತೋರಿಸಿದ ದಾರಿಯಲ್ಲಿ ನಡೆದರೆ ಅವರು ತೃಪ್ತರಾಗಿ ಮೇಲಿನ ಲೋಕಗಳಿಂದ ನಮ್ಮನ್ನು ಹರಸಿಯಾರು."

**೨. ಎ.ಆರ್.ಕೃಷ್ಣಶಾಸ್ತ್ರಿಗಳು : ೧೨-೨-೧೮೯೦ ೧-೨-೧೯೬೮**

"ನಾನು, ಪ್ರೊ. ವೆಂಕಣ್ಣಯ್ಯ ಬಿ.ಎಂ.ಶ್ರೀ.ಯವರ ಮೊದಲನೆಯ ತಂಡದ ಶಿಷ್ಯರು. ಆಗವರು ಇಂಗ್ಲಿಷ್ ಪ್ರೊಫೆಸರ್‌ರಾಗಿ, ಕನ್ನಡದ ಗೌರವ ಪ್ರೊಫೆಸರಾಗಿ ಕನ್ನಡ ಪ್ರೌಢ ತರಗತಿಗಳಿಗೆ ಉಪನ್ಯಾಸ ನೀಡುತ್ತಿದ್ದರು. ಕಾಲೇಜಿನ ತರಗತಿಗಳಲ್ಲಿ ಎಷ್ಟು ಇಂಗ್ಲಿಷ್ ಪಾಠ ಹೇಳುತ್ತಿದ್ದರೊ ಅಷ್ಟು ಕನ್ನಡವನ್ನು ಇಂಟರ್‌ಮಿಡಿಯಟ್ ಮತ್ತು ಬಿ.ಎ. ತರಗತಿಗಳಿಗೆ ಪಾಠ ಹೇಳುತ್ತಿದ್ದರು. ಅವರ ಬೋಧನಾಕ್ರಮದಲ್ಲಿ ಇಂಗ್ಲಿಷ್ ತರಗತಿಗಳಿಗೆ ಕನ್ನಡದ ಉಪಯೋಗವೂ ಕನ್ನಡದ ತರಗತಿಗಳಿಗೆ ಇಂಗ್ಲಿಷ್‌ನ ಉಪಯೋಗವೂ ಆಗುತ್ತಿತ್ತು.

ಸಾಹಿತ್ಯವನ್ನು ಐತಿಹಾಸಿಕ ಮತ್ತು ತುಲನಾತ್ಮಕ ದೃಷ್ಟಿಯಿಂದ ಓದಿದರೆ ನಿಜವಾದ ಬೆಲೆಕಟ್ಟುವ ವಿಮರ್ಶೆ ಬುದ್ಧಿಗೆ ಬರುವುದೆಂಬುದನ್ನು ಅವರು ತೋರಿಸಿಕೊಟ್ಟರು. 'ನಮ್ಮ ಓದುವ ಮನೆಯ ಕಿಟಕಿಗಳನ್ನು ತೆರೆಯಿರಿ. ಎಲ್ಲೆಲ್ಲಿಂದ ಬೆಳಕು ಬಂದರೂ ಅದನ್ನು ಬರಮಾಡಿಕೊಳ್ಳಿ. ಸೂರ್ಯನನ್ನು ಎಲ್ಲೆಲ್ಲಿ ಕಂಡರೆ ಅಲ್ಲಲ್ಲಿ ಕೈ ಮುಗಿಯಿರಿ. ಎಂದು ಸಂಸ್ಕೃತಿ ಪ್ರಪಂಚದಲ್ಲಿ ಒಂದು ವಿಶಾಲವಾದ ಭಾವನೆಯನ್ನು ಬೆಳೆಸಿದರು. ಪಾಶ್ಚಾತ್ಯ ಸಾಹಿತ್ಯವೆಂದರೆ ಬರಿಯ ಇಂಗ್ಲಿಷ್ ಸಾಹಿತ್ಯವಲ್ಲ, ಅವೆಲ್ಲಕ್ಕೂ ಮೂಲವಾದ, ಮೇಲಾದ ಗ್ರೀಕ್ ಸಾಹಿತ್ಯವಿದೆ ಎಂದು ಅದನ್ನು ಶಿಕ್ಷಣ ಕ್ಷೇತ್ರಕ್ಕೆ ತಂದರು. ಆ ಕೆಲಸವನ್ನು 'ಅಶ್ವತ್ಥಾಮನ್', 'ಪಾರಸಿಕರು' ನಾಟಕಗಳನ್ನು ಬರೆದು ಮಾಡಿದ್ದುದಕ್ಕಿಂತ ಹೆಚ್ಚಾಗಿ ಪಾಠ ಹೇಳಿ ಮಾಡಿದ ಅಂಥವರು ಮತ್ತೊಬ್ಬರಿಲ್ಲ.

ಮಹಾರಾಜ ಕಾಲೇಜಿನ ಕರ್ನಾಟಕ ಸಂಘದ ಮತ್ತು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಅಧ್ಯಕ್ಷರಾಗಿ ಪ್ರಬುದ್ಧ ಕರ್ನಾಟಕ ಸಂಪಾದಕ ಮಂಡಲಿಯ ಮತ್ತು ಕನ್ನಡ ಗ್ರಂಥ ಪ್ರಕಾಶನ ಸಮಿತಿಯ ಅಧ್ಯಕ್ಷರಾಗಿ ದುಡಿದರು.

ಅವರು ಮೈಸೂರು ವಿಶ್ವವಿದ್ಯಾನಿಲಯದ ಸಂಘದ ಅಧ್ಯಕ್ಷರಾಗಿದ್ದಾಗ ಅದರ ವಾರ್ಷಿಕೋತ್ಸವದ ಕಾಲದಲ್ಲಿ ಕನ್ನಡ ನಾಟಕವನ್ನು ಆಡುವುದಕ್ಕೆ

ಮೊದಲಾಯಿತು. ಗದಾಯುದ್ಧ ನಾಟಕಕ್ಕೆ ಅಗ್ರಪೂಜೆ ದೊರೆಯಿತು. 'ಅಶ್ವತ್ಥಾಮನ್' ಎಂಬ ಮತ್ತೊಂದು ಸಿಡಿಲನ್ನು ಸೃಷ್ಟಿಸಿದರು. ಎರಡೂ ನಾಟಕಗಳ ಭಾಷೆ ಹಳೆಗನ್ನಡ ಆದರೂ ಅವು ಜನರ ಮೆಚ್ಚುಗೆ ಪಡೆದವು".

**೩. ಮಾಸ್ತಿ ವೆಂಕಟೇಶ ಐಯ್ಯಂಗಾರ್: ೬-೬-೧೮೯೧ ೬-೬-೧೯೮೬**

"ಬಿ.ಎಂ.ಶ್ರೀ. ಎಫ್.ಎ. ತರಗತಿಯಲ್ಲಿ ನನಗೆ ಪಾಠ ಹೇಳಿದ ಗುರುಗಳು. ಕನ್ನಡ ನಾಡು ನುಡಿಯ ಸೇವೆಯಲ್ಲಿ ನಮ್ಮ ತಲೆಮಾರಿನವರಿಗೆ ನಾಯಕರಾಗಿ, ಕನ್ನಡ ಕುಟುಂಬಕ್ಕೇ ಹಿರಿಯರಾದರು. ಈ ಎರಡು ಕಾರಣಗಳಿಂದ ಅವರು ನನಗೆ ಗುರುಗಳು. ಅವರು ಜೀವಂತವಾಗಿದ್ದಾಗ ೧೯೪೧ ರಲ್ಲಿ ಪ್ರಕಟಿಸಿ ಅರ್ಪಣೆ ಮಾಡಿದ ಏಕೈಕ ಅಭಿನಂದನಾ ಗ್ರಂಥ 'ಸಂಭಾವನೆ'ಯ ಸಂಪಾದಕ ಮಂಡಲಿಯ ಅಧ್ಯಕ್ಷನಾಗಿದ್ದೆ.

ಕನ್ನಡ ಸಾಹಿತ್ಯ ಪರಿಷತ್ತು ಶ್ರೀಮತಿ ವಿಶಾಲಾಕ್ಷಿ ಸಂಪಾದಿಸಿದ "ಶ್ರೀ ಉತ್ಸವ" ಗ್ರಂಥಕ್ಕೆ ನಾನು ಮುನ್ನುಡಿಯನ್ನು ಬರೆದುಕೊಟ್ಟಿದ್ದೇನೆ. ೧.೯೩ ನೇ ಇಸವಿ ಮಾರ್ಚಿ ೨೫ ರಲ್ಲಿ 'ಶ್ರೀ'ಯವರ ಹುಟ್ಟಿದ ಹಬ್ಬದ ಸಮಾರಂಭ ಸಂಭ್ರಮದಿಂದ ನಡೆದ ಸಂದರ್ಭದಲ್ಲಿ ನಾನು 'ಶ್ರೀ' ಅವರನ್ನು ಕುರಿತು ಹೇಳಿದ ಮಾತುಗಳಿವು.

'ಶ್ರೀ' ಯವರೆಂದರೆ ಕನ್ನಡ, ಕನ್ನಡವೆಂದರೆ ಶ್ರೀ ಅವರು ನಾಲ್ಕು ದಶಕಗಳ ಕಾಲ ದುಡಿದು ಕನ್ನಡ ಸಾರಸ್ವತ ಪ್ರಪಂಚವನ್ನು ಬೆಳೆಸಿದರು, ಬೆಳಗಿಸಿದರು. ಕನ್ನಡ ಭಾಷೆಯ ಮುನ್ನುಡಿಗೆ ಅವರಿಟ್ಟ ಹೆಜ್ಜೆ, ತೋರಿಸಿದ ದಾರಿ, ಮಾಡಿದ ಕಾಯಕ ನಿಜಕ್ಕೂ ಮಾನನೀಯ, ಅನುಕರಣೀಯ ಹಾಗೂ ಅಪಾರ ಅನುಪಮ. ಇಂದು ಕನ್ನಡದಲ್ಲಿ ಯಾರು ಯಾರು ಎಲ್ಲೆಲ್ಲಿ ಏನೇನು ಬರೆಯುತ್ತಿದ್ದಾರೊ, ಯಾವ ಯಾವ ವಾಣಿ ಕನ್ನಡದಲ್ಲಿ ಕೇಳಿ ಬರುತ್ತಿದೆಯೊ ಅದೆಲ್ಲವೂ ಅವರ ಪ್ರಭಾವದಿಂದ ಎಂದು ಹೇಳಲು ಅಡ್ಡಿಯಿಲ್ಲ.

**೪. ಡಾ: ಎಸ್.ವಿ.ರಂಗಣ್ಣ : ೨೪-೧೨-೧೮೯೮ - ೧-೧೨-೧೯೮೭**

"ಗುರುವರೇಣ್ಯ ಬಿ.ಎಂ.ಶ್ರೀಕಂಠಯ್ಯನವರನ್ನು ನಾನು ಮೊದಲು ಸಂದರ್ಶಿಸಿದ್ದು ಎಂ.ಎ.ತರಗತಿಯಲ್ಲಿ. ವಿಕ್ಟೋರಿಯ ಕಾಲದ ಸಾಹಿತ್ಯವನ್ನು ನಮ್ಮ ತರಗತಿಗೆ ಅವರು ಬೋಧಿಸುತ್ತಿದ್ದರು. ಇಂಗ್ಲಿಷ್ ಕಾವ್ಯಗಳು, ಷೇಕ್ಸ್‌ಪಿಯರ್ ನಾಟಕಗಳನ್ನು ಕುರಿತು ಉಪನ್ಯಾಸ ನೀಡಲು ನಿಂತರೆ ಅದರ ವೈಭವ ಸವಿಯಬೇಕಾದ್ದು. ಶ್ರದ್ಧೆಯಿಂದ, ಸೌಹಾರ್ದದಿಂದ ಕೇಳುವವರ ಮೇಲೆ ಅದರ

ಪ್ರಭಾವ, ಪರಿಣಾಮ ಅಜೀವಪರ್ಯಂತ ಉಳಿಯುವಂಥಹದು. ಅವರ ನುಡಿಗಟ್ಟಿನಲ್ಲಿ ಜ್ಞಾನ, ಪ್ರತಿಭೆ, ಗಾಢಾನುಭವ ಪ್ರಕಾಶವಾಗಿರುತ್ತಿತ್ತು. ಒಂದು ಅಪೂರ್ವತೆ, ಅನಿರೀಕ್ಷಿತ ಸೊಗಸು, ಬೇರೆಲ್ಲೂ ಸಿಗದ ವ್ಯಕ್ತಿ ವೈಶಿಷ್ಟ್ಯ ಕೂಡಿಕೊಂಡೇ ಇರುತ್ತಿತ್ತು.

ಅವರು ವಾಗ್ಮೀಯುತರು, ವಾಕ್ಕೋವಿದರು, ವಾಗ್ವೈಭವಶಾಲಿಗಳು, ವಾಗ್ಮಿತೆಯಲ್ಲಿ ಅವರ ಐಹಿಕ ಸಾಹಸಗಳ ಚರಿತ್ರೆ ಅಡಗಿತ್ತು. ಅವರ ಆತ್ಮದ ಕುರುಹು ಪ್ರತಿಬಿಂಬಿಸಿತ್ತು. ಅವರ ಉಪನ್ಯಾಸಗಳ ಸ್ವರೂಪ, ಪ್ರಭಾವ, ಕಾರ್ಯಸಾಧನೆ ಮಹತ್ತರವಾದದ್ದು. ಆ ಉಚ್ಚಾರಣೆ, ಆ ಅವಧಾರಣೆ, ಆಲಯು, ಆ ಗಡಿ, ಆ ಝುರಿ, ಆ ಜಾಣ್ಮೆ, ಆ ಪದ ವಿನ್ಯಾಸ ಕಲೆ, ಆ ಆನಂದಲಹರಿಯನ್ನು ಇನ್ನೆಂದು ಅನುಭವಿಸೋಣ? ಅವರೆಂಬ ಆಶುಭಾಷಣಕಾರರು, ಮಾಗಿ ಹಣ್ಣಾದ ಪಾಂಡಿತ್ಯದ ವಿದ್ವಾಂಸರು ನಿಷ್ಪಕ್ಷವಾದ ರಾಗ ಸಹಿತವಾದ ದಟ್ಟವಾದ ವಿಚಾರ ವಿಚಕ್ಷಣೆಯನ್ನು ಪ್ರಚೋದಿಸುವುದು, ಪ್ರೋತ್ಸಾಹಿಸುವುದು ಅವರ ಉಪನ್ಯಾಸದ ಸಾರ, ತಿರುಳು, ಸತ್ವ, ಸ್ವಾರಸ್ಯ.

ಕನ್ನಡಕ್ಕಾಗಿ ದುಡಿದವರ ಸಂಖ್ಯೆಯೇನೂ ಕಡಿಮೆಯಿಲ್ಲ. ಆದರೂ 'ಶ್ರೀ'ಯವರಂತೆ ತಮ್ಮೆಲ್ಲ ಬುದ್ಧಿ, ಪಾಂಡಿತ್ಯ, ಶಕ್ತಿ, ತೇಜಸ್ಸು, ವರ್ಚಸ್ಸುಗಳನ್ನು ವಿನಿಯೋಗಿಸಿದವರು ವಿರಳ. ಪ್ರಥಮ ಶ್ರೇಣಿಯ ಭಾಷಣಕಾರನಿಗೆ ಇರಬೇಕಾದ ಶಾರೀರಿಕ, ಮಾನಸಿಕ ಗುಣಗಳೆಲ್ಲವೂ ಅವರಲ್ಲಿತ್ತು. ಯಾರು ಕರೆದರೂ ಹೋಗಿ ಭಾಷಣ ಮಾಡುತ್ತಿದ್ದರು. ಅವರು ಭಾಷಣವನ್ನು ಮಾಡುತ್ತಿರಲಿಲ್ಲ, ಭಾಷಣವನ್ನು ಬಾಳುತ್ತಿದ್ದರು. ಅವರ ಭಾಷಣ ಉಪನ್ಯಾಸಗಳನ್ನು ಕೇಳಲು ಜನರು ಹಾತೊರೆಯುತ್ತಿದ್ದರು. ವಿದ್ಯಾರ್ಥಿಗಳು, ಅಧ್ಯಾಪಕರುಗಳು, ಸಾರ್ವಜನಿಕರು ಅವರ ಉಪನ್ಯಾಸಗಳನ್ನು ಕೇಳಿ ತಮ್ಮ ಕಣ್ಣು, ಕಿವಿ, ಹೃದಯ, ಮನಸ್ಸು, ಆತ್ಮ ಎಲ್ಲಕ್ಕೂ ಹಬ್ಬ ಮಾಡಿಕೊಳ್ಳಲು ಬಯಸುತ್ತಿದ್ದರು. ವೇದಿಕೆ ಹತ್ತಿದ ಕೂಡಲೇ ವಾಗ್ದೇವಿ ಅವರ ನಾಲಿಗೆಯ ಮೇಲೆ ನರ್ತಿಸುತ್ತಿದ್ದಳು. ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ ಹಿನ್ನಲೆಗಳನ್ನು ನವೀನ ರೀತಿಯಲ್ಲಿ ವಿವರಿಸುತ್ತಿದ್ದರು. ಮಾತುಗಾರಿಕೆಯ ಶೈಲಿ ಅವರಿಗೆ ಸಂಪೂರ್ಣವಾಗಿ ಕರಗತವಾಗಿತ್ತು.

'ಇಂಗ್ಲಿಷ್ ಸೆಮಿನಾರ್' ಎಂಬ ವ್ಯಾಸಂಗ ಗೋಷ್ಠಿಯನ್ನು ಸ್ಥಾಪಿಸಿ ಗ್ರಂಥಗಳ ಚರ್ಚೆಗೆ ಅವಕಾಶಮಾಡಿ ಕೊಡುತ್ತಿದ್ದರು. ನಾನು ಆ ಗೋಷ್ಠಿಯ ಕಾರ್ಯದರ್ಶಿ ಯಾಗಿದ್ದೆ. ಕುಮಾರವ್ಯಾಸನ ಹಾಗೆ ಅವರು ಪದಗಳೊಡನೆ ಚಕ್ಕಂದವಾಡುತ್ತಿದ್ದರು. ಅದರಲ್ಲಿ ಸ್ವಾಭಾವಿಕವಾಗಿ, ಸುಂದರವಾಗಿ, ಅಪ್ರಯಾಸವಾಗಿ, ಫಲಪ್ರದವಾಗಿ

ಪ್ರಾಸ ಬರುತ್ತಿತ್ತು. ಅವರ ಬರವಣಿಗೆಯ ಮೆರವಣಿಗೆಯಲ್ಲಿ ಗಜರಾಜನ ಗತ್ತು, ಗಾಂಭೀರ್ಯ ರಾಜ ವೈಖರಿಯಿದ್ದರೆ, ಅವರ ಭಾಷಣಗಳು ಬಲಿಷ್ಠ ಮತ್ತು ಭಾವಪ್ರಧಾನವಾಗಿ ಭಾವಪೂರಿತವಾಗಿದ್ದವು.

'ಶ್ರೀ'ಯವರಿಗೆ ಮೊದಲೇ ಕೆಲವು ಕವಿಗಳು ಇಂಗ್ಲಿಷ್ ಕಾವ್ಯಗಳನ್ನು ಅನುವಾದಿಸಿದ್ದರೂ ಅವರಿಗೆ 'ಶ್ರೀ' ಯವರಿಗೆ ದೊರೆತ ಯಶಸ್ಸು ದೊರಕಲಿಲ್ಲ ಎನ್ನಬಹುದು.

ಕವನಗಳನ್ನು ಗಟ್ಟಿಯಾಗಿ ಓದುವುದೆಂದರೆ ಅವರಿಗೆ ತುಂಬ ಪ್ರೀತಿ. ಒಮ್ಮೆ ಲಾಲ್‌ಬಾಗಿನಲ್ಲಿ ಹುಲ್ಲಿನ ಮೇಲೆ ಕುಳಿತು ಗಟ್ಟಿಯಾಗಿ ಓದುತ್ತಾ ಕುಳಿತಿದ್ದಾಗ ಅದನ್ನು ಕೇಳಿದ ವಿದೇಶಿ ಪ್ರವಾಸಿಗ ಮತ್ತಷ್ಟು ಅವರಿಂದ ಓದಿಸಿ ಸಂತೋಷಪಟ್ಟನಂತೆ.

ಕೇಳಿದವರಿಗೆಲ್ಲ ಪ್ರೀತಿಯಿಂದ ಮುನ್ನುಡಿ ಬರೆದುಕೊಡುತ್ತಿದ್ದರು. 'ಮುನ್ನುಡಿ ಬರೆದುಕೊಡುತ್ತೀರಲ್ಲ, ಸ್ವಲ್ಪ ವಿಮರ್ಶೆ ಮಾಡಬಾರದೆ?' ಎಂದು ನಾನು ಪ್ರಶ್ನಿಸಿದಾಗ "ಅದೆಲ್ಲ ಬೇಡ, ಹಾಗೆ ಮಾಡಬಾರದು ಅವರು ಕನ್ನಡದಲ್ಲಿ ಬರೆಯುತ್ತಾರಲ್ಲ ನಾವು ಪ್ರೋತ್ಸಾಹಿಸಬೇಕು, ಅಷ್ಟು ಸಾಕು" ಎಂದರು.

ಅವರು ಸದಾ 'ಕನ್ನಡ, ಕನ್ನಡ' ಎಂದು ಜಪಿಸುತ್ತಿದ್ದರು. ಕನ್ನಡಕ್ಕಾಗಿ ಏನು ಮಾಡಲೂ ಸಿದ್ಧರಾಗಿದ್ದರು. ಕನ್ನಡದ ಹುಚ್ಚು ಅವರಿಗೆ ಹಿಡಿದಿತ್ತು. ಅದು ಒಳ್ಳೆಯ ಹುಚ್ಚು. ಒಳ್ಳೆಯ ಉನ್ಮಾದ. ಆ ಹುಚ್ಚನ್ನು ಅನೇಕರಿಗೆ ಹಿಡಿಸಬೇಕೆಂದು ಪ್ರಯತ್ನಪಟ್ಟರು, ಆದರೆ ನಾವು ಅಷ್ಟೊಂದು ಹುಚ್ಚರಾಗಿರಲಿಲ್ಲ. ಕನ್ನಡ ನಾಡಿನ ಇಂದಿನ ಪ್ರಗತಿಯಲ್ಲಿ ಯಾವ ಭಾಗವನ್ನು ತೆಗೆದುಕೊಂಡರೂ ಅಲ್ಲಿ ಅವರ ಶ್ರಮ, ಪ್ರೇರಣೆ ಇದ್ದೇ ಇರುತ್ತದೆ.

ಶ್ರೀ ಒಂದು ವ್ಯಕ್ತಿಯಲ್ಲ, ಒಂದು ಸಂಸ್ಥೆ, ಹಿರಿಯ ಸಂಸ್ಥೆ. ಅಜರಾಮರವಾದ ಅನುಸರಿಸಬೇಕಾದ ಆದರ್ಶ ಸಂಸ್ಥೆ!"

**೫. ಡಾ. ವಿ. ಸೀತಾರಾಮಯ್ಯ : ೨-೧೦-೧೮೯೯ ೪-೯-೧೯೮೩**

ಬಿ.ಎಂ.ಶ್ರೀ. ಕನ್ನಡಕ್ಕೆ ಹಿರಿಗನಸು ಕಂಡವರು. ಆ ಕನಸನ್ನು ನನಸು ಮಾಡಲು ಬಗೆದವರು, ದುಡಿದವರು, ನಡೆದವರು, ಇತರರನ್ನು ನಡೆಸಿದವರು. ಕನ್ನಡದ ಕೆಲಸ ಏನೇನು ಆಗಿದ್ದವೋ, ಅವೆಲ್ಲದರ ಚಾಲಕ ವ್ಯಕ್ತಿಗಳಲ್ಲಿ ಮುಖ್ಯವಾದ ಒಂದು ನಾಯಕ ಶಕ್ತಿಯಾಗಿದ್ದರು. ಕನ್ನಡದ ಏಳಿಗೆಗಾಗಿ ಕಳಸ ಹೊತ್ತ ಮುತ್ತೈದೆ ತಾನು ಎಂದದ್ದುಂಟು ಅವರು.

ಅವರಿಗೆ ಹಲವಾರು ಭಾಷೆಗಳ ಪರಿಚಯವಿತ್ತು. ಆ ಭಾಷೆಗಳ ಉತ್ತಮ ಕೃತಿಗಳ ಸ್ವರೂಪವನ್ನು ಸೊಗಸನ್ನು ಕಂಡಿದ್ದರು. ಇಂಗ್ಲಿಷ್ ಸಾಹಿತ್ಯದ ಅತ್ಯುತ್ತಮ ಅನುಭವ, ಸಂಸ್ಕಾರ ಅವರಿಗಿತ್ತು. ಇಂಗ್ಲಿಷ್ ಸಾಹಿತ್ಯದ ಮೂಲಕ ಇತರ ಪಾಶ್ಚಾತ್ಯ ಮತ್ತು ಪೌರತ್ಯ ಸಾಹಿತ್ಯ, ಕಲೆ, ಸಂಸ್ಕೃತಿ, ಸಾಧನೆಗಳನ್ನು ಮನಗಂಡಿದ್ದರು. ಹೊಸ ದೃಷ್ಟಿ, ರೀತಿ, ನಯ, ಹದಮಾನೆಗಳುಳ್ಳ ಕೃತಿಗಳನ್ನು ರಚಿಸಿದರು. ಅಚ್ಚ ಕನ್ನಡದ ಕೆಚ್ಚು, ಕಿಚ್ಚು ಎಂಥಹುದು ಎಂಬುದನ್ನು ತೋರಿಸುವಂತೆ ಹಳೆಗನ್ನಡ, ಹೊಸಗನ್ನಡ ಈ ಎರಡು ಸಂಪ್ರದಾಯಗಳಲ್ಲೂ ಇನ್ನೊಬ್ಬರು ಅದನ್ನು ಮೀರಿಸಲು ಸಾಧ್ಯವಿಲ್ಲ ಎನ್ನುವಂತೆ ಕೃತಿಗಳನ್ನು ರಚಿಸಿದರು.

ಅವರ ಇಂಗ್ಲಿಷ್ ಉಪನ್ಯಾಸಗಳನ್ನು ಕೇಳುತ್ತಿದ್ದಾಗ ಇಂಗ್ಲಿಷ್ ನಮಗೆ ಅನ್ಯಭಾಷೆ ಎನ್ನುವುದೇ ಮರೆತು ಹೋಗುತ್ತಿತ್ತು.

'ಶ್ರೀ'ಯವರು ವ್ಯಾಕರಣ ನಿರುಕ್ತ, ಭಾಷಾ ಚರಿತ್ರೆ, ಛಂದಸ್ಸು ವಿಮರ್ಶೆ, ಸಾಹಿತ್ಯ ನಿರ್ಮಾಣ, ಧರ್ಮ ಸಂಸ್ಕೃತಿಗಳ ಸಾರ ಮುಂತಾದ ವಿಚಾರಗಳಲ್ಲಿ ತಿಳುವಳಿಕೆ ಬರುವಂತೆ ಪ್ರವಚನಗಳನ್ನು ನೀಡುತ್ತಿದ್ದರು. ಅವರ ಉಪನ್ಯಾಸಗಳಿಂದ ಒಂದು ಜೀವನಕ್ಕೆ ಸಾಕಾಗುವಷ್ಟು ಸಂಪತ್ತನ್ನೂ ಸಂಸ್ಕಾರವನ್ನೂ ತುಂಬಿಕೊಳ್ಳಬಹುದಾಗಿತ್ತು. ಉಪನಿಷತ್ತಿನ ಚೆಲುವು, ಸಂಪತ್ತನ್ನು ಪ್ರವಚನಗಳ ಮೂಲಕ ಹರಡಿದರು. ಇಂಗ್ಲಿಷ್, ಕನ್ನಡ, ತಮಿಳಿನಲ್ಲಿ ಉಪನ್ಯಾಸ ನೀಡಿದರು.

ಚಂಪೂ ಕಾಲದ ಸಾಹಿತ್ಯ ಸಂಪತ್ತಿಗಿಂತ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತಗಳನ್ನು ಕುರಿತ ಅವರ ಉಪನ್ಯಾಸಗಳನ್ನು ಒಮ್ಮೆ ಕೇಳಿದವರು ಅವರನ್ನಾಗಲಿ, ಅವರ ಉಪನ್ಯಾಸಗಳನ್ನಾಗಲಿ ಮರೆಯಲು ಶಕ್ಯವಿರಲಿಲ್ಲ.

ಹರಿದು ಹಂಚಿಹೋಗಿದ್ದ ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ಸುತ್ತಾಡಿ ಜನರಲ್ಲಿ ಉತ್ಸಾಹವನ್ನು ಹೊಸೆದರು, ಬೆಸುಗೆಯನ್ನು, ಬೆಸೆದರು. ಕನ್ನಡದ ಬಾವುಟ ಹಿಡಿದು ಮುಂದೆ ನಡೆದರು. 'ನಾನು ಉತ್ತರ ದಕ್ಷಿಣದ ಕರ್ನಾಟಕದ ಪ್ರಾಂತಗಳಿಗೆ ಸೇತುವೆಯಂತೆ ಇರುತ್ತೇನೆ. ಅಲ್ಲಿದ್ದವರು ಇಲ್ಲಿಗೆ, ಇಲ್ಲಿದ್ದವರು ಅಲ್ಲಿಗೆ ಬಂದು ಹೋಗಿ ಸ್ನೇಹಗಳು ಬೆಳೆಯಲಿ, ಕನ್ನಡನಾಡು ರಾಜಕೀಯ ವಾಗಿಯೂ ಒಂದಾಗಲಿ ಎಂದು ಅವರು ಹಾರೈಸುತ್ತಿದ್ದರು.

ಅವರ ಸ್ಮೃತಿ ಅನಂತ ಕಾಲಕ್ಕೂ ನಿಲ್ಲುವಂಥಹುದು, ಅದು ಅವರ ಕೃತಿಗಳಲ್ಲಿ ನೆಟ್ಟು ಬೇರು ಬಿಟ್ಟು ನಿಂತಿದೆ. ಅವರು ಸ್ಫೂರ್ತಿ ಕೊಟ್ಟ ಜೀವಿಗಳ ಉಸಿರಲ್ಲಿ ಉತ್ಸಾಹಗಳಲ್ಲಿ ನೆಲಸಿ ಕಾರ್ಯ ಮಾಡುತ್ತಿದೆ, ಅವರ ತುಂಬು ರೂಪು,

ನಿಲುವು, ಉಡುಪಿನ ಅಚ್ಚುಗಟ್ಟು, ಅವರ ಮುಖದ ತೇಜಸ್ಸು, ಎದೆಯಾಳದಿಂದ ಹೊಮ್ಮುತ್ತಿದ್ದ ಸಾಹಿತ್ಯದ ನಿಷ್ಠೆ, ದರ್ಶನ, ಅವರ ಕಂಠಶ್ರೀ-ಇವು ಎಂದಿಗೇ ಆಗಲಿ ಅವರನ್ನು ಕಂಡು ಕೇಳಿದವರಿಗೆ ಮರೆಯಲಾಗದ ಲಕ್ಷಣಗಳು.

**೬. ಎ.ಎನ್. ಮೂರ್ತಿರಾವ್: ೧೬-೬-೧೯೦೦ - ೨೩-೮-೨೦೦೩.**

"ಬಿ.ಎಂ.ಶ್ರೀ. ಯವರು ಐದು ವರ್ಷಗಳ ಕಾಲ-ಮೂರು ವರ್ಷ ಬಿ.ಎ. ಕ್ಲಾಸಿನಲ್ಲಿ, ಎರಡು ವರ್ಷ, ಎಂ.ಎ. ಕ್ಲಾಸಿನಲ್ಲಿ ನನ್ನ ಗುರುಗಳಾಗಿದ್ದರು. ನಂತರ ಬದುಕಿರುವವರೆಗೂ ಗುರುಸ್ಥಾನೀಯರಾಗಿದ್ದರು. ಹದಿನೈದನೆಯ ವಯಸ್ಸಿನಲ್ಲಿ ಹೈಸ್ಕೂಲಿನಲ್ಲಿದ್ದಾಗ ನಾನು ಅವರನ್ನು ಪ್ರಥಮ ಬಾರಿ ಭೇಟಿಯಾದೆ. ಶಾಲೆಯ ಚರ್ಚಾಕೂಟಕ್ಕೆ ಸ್ಪೀಕರ್ ಆಗಿ ಬರಬೇಕೆಂದು ಅವರನ್ನು ಆಹ್ವಾನಿಸಲು ಮನೆಗೆ ಹೋಗಿದ್ದೆ. 'Ancient India was better than moden India' ವಿಷಯವಾಗಿ ಚರ್ಚಾಕೂಟ ಏರ್ಪಡಿಸಿದ್ದೀವಿ, ತಾವು ಬರಬೇಕು' ಎಂದು ಅವರಲ್ಲಿ ವಿನಂತಿಸಿಕೊಂಡಾಗ ಅವರು ನಗುತ್ತಾ 'You are having a debate- ancient India was better then Moden India? India is better than anything else; and ancient India was better than anything Modern! A self is not evident proposition is'nt it?ಎಂದು ಪ್ರಶ್ನಿಸಿದರು. ಯಾವುದೋ ಕಾರಣದಿಂದ ಅವರು ಡಿಬೇಟಿಗೆ ಬರಲಿಲ್ಲ.

'ಶ್ರೀ ಯವರ ಉಪನ್ಯಾಸಗಳು ಉಪನದಿಗಳ ಕಾಣಿಕೆಯನ್ನು ಸ್ವೀಕರಿಸಿದ ಮಹಾನದಿಯಂತೆ ಹರಿಯುತ್ತಿದ್ದವು. ಅವರ ಉಪನ್ಯಾಸಗಳು ನಮಗೆ ಮನೋಹರವಾದ ಸಂಗೀತವನ್ನು ಕೇಳಿದಂತೆ ಅನುಭವವಾಗುತ್ತಿತ್ತು. ಅವರ ಪ್ರವಚನಗಳಲ್ಲಿ ಅವರಿಗಿದ್ದ ಪಾಂಡಿತ್ಯ ಅಗಾಧವಾದದ್ದು. ಅನುಪಮವಾದ ರೀತಿಯಲ್ಲಿ ಅವರು ಪಾಠ ಹೇಳಿದ್ದುಂಟು, ಭಾಷಣ ಮಾಡಿದ್ದುಂಟು. ಒಳ್ಳೆಯ ಕವನ ಬರೆದದ್ದುಂಟು. ಆದರೂ ನನ್ನ ದೃಷ್ಟಿಯಲ್ಲಿ ಅವರು ಪ್ರಥಮ ಅಧ್ಯಾಪಕರಲ್ಲ, ಭಾಷಣಕಾರರಲ್ಲ, ಅವೆರಡಕ್ಕಿಂತ ಹೆಚ್ಚಾಗಿ ಕವಿಗಳು, ಅದಕ್ಕಿಂತ ಹೆಚ್ಚಾಗಿ ಸೇನೆಯೊಂದರ ಸೇನಾನಿ, ಕ್ರಾಂತಿಯೊಂದರ ಕೇಂದ್ರ, ಪಂಥವೊಂದರ ಪ್ರವಾದಿ ಎನ್ನುಬಹುದು.

ಶ್ರೀಯವರ 'ಇಂಗ್ಲಿಷ್ ಗೀತಗಳು' ಪ್ರಕಟವಾದಾಗ ನಾಡಿನಾದ್ಯಂತ ಹಾಡು ಕೇಳಿ ಬರುವಂತಾಯಿತು. ಯಾಕೆಂದರೆ ಆ ಸಂದರ್ಭದಲ್ಲಿ ಎಲ್ಲರ ಮನಸ್ಸಿನಲ್ಲಿ ಹಿಂದಿನ ಕಾವ್ಯಗಳ ಬಗ್ಗೆ ಅತೃಪ್ತಿಯಿತ್ತು. ಅದಕ್ಕವರು ಜ್ಯೋತಿ ಸ್ಪರ್ಶಿಸಿ ಉಪಕಾರ ಮಾಡಿದರು. ಅವರು ಮನಸ್ಸಿಗೆ ಒಂದು ಬಗೆಯ ಸ್ವಾತಂತ್ರ್ಯವನ್ನು ಕೊಟ್ಟರು.

ಆಗ ನಾವು ತಡೆಯಿಲ್ಲದೆ ಸಂಚರಿಸುವುದಕ್ಕೆ ಪ್ರಾರಂಭಿಸಿದೆವು. ಇಂಥಿಂಥ ಕಡೆ ಇಂಥಿಂಥ ಗಣಿ ಇದೆ ಎನ್ನೋದು ನಮಗೆ ಗೊತ್ತಾಯಿತು. ಗಣಿಗೆ ಹೋಗಿ ನಮಗೆ ಬೇಕಾದುದನ್ನೆಲ್ಲ ಹೊತ್ತುಕೊಂಡು ಬಂದೆವು. ನೇರವಾಗಿಯೊ, ಅಪ್ರತ್ಯಕ್ಷವಾಗಿಯೋ ಇಂದಿನ ನಮ್ಮ ಎಲ್ಲ ಸಾಹಿತ್ಯದ ಮೇಲೂ ಅವರ ಮುದ್ರೆ ಇದ್ದೇ ಇದೆ. ಅದಕ್ಕಾಗಿ ನಾವು ಅವರಿಗೆ ಎಷ್ಟು ಕೃತಜ್ಞರಾಗಿದ್ದರೂ ಸಾಲದು.

ಅವರು ಛಂದಸ್ಸಿನಲ್ಲಿ ಹೊಸಮಾರ್ಗವನ್ನು ಅನುಸರಿಸಿದರು. ಹೊಸ ಮಾದರಿಗಳನ್ನು ತೋರಿಸಿಕೊಟ್ಟರು. ಸರಳವಾದ ಭಾಷೆ ಕಾವ್ಯಕ್ಕೆ ಉತ್ತಮ ಎಂಬುದನ್ನು ತಿಳಿಯಾದ ಅಚ್ಚ ಹೊಸಗನ್ನಡದಲ್ಲಿ ಎಷ್ಟು ಪರಿಣಾಮಕಾರಿಯಾಗಿ ಬರೆಯಬಹುದು ಎನ್ನುವುದನ್ನು ತಿಳಿಸಿಕೊಟ್ಟರು. ನಮ್ಮ ಸ್ವಂತ ಅನುಭವ, ನಾವು ಕಣ್ಣಲ್ಲಿ ಕಂಡಿದ್ದು, ಕಿವಿಯಲ್ಲಿ ಕೇಳಿದ್ದು, ಮನಸ್ಸಿನಲ್ಲಿ ಸಂಕಟಪಟ್ಟಿದ್ದು ಅಥವಾ ಸಂತಾಪ ಪಟ್ಟಿದ್ದು–ಇವೆಲ್ಲಾ ಕಾವ್ಯಕ್ಕೆ ವಿಷಯವಾಗಬಹುದು ಎಂಬುದನ್ನು ಸ್ಪಷ್ಟಪಡಿಸಿದರು. ಕನ್ನಡಕ್ಕಾಗಿ ಪ್ರಚಾರ ಮಾಡಿದರು. ತಾವೇ ಸಾಹಿತ್ಯವನ್ನು ಸೃಷ್ಟಿಸಿದರು. ನಮ್ಮ ವಿಶ್ವವಿದ್ಯಾನಿಲಯದ ಒಳಗೂ ಹೊರಗೂ ಜನರು ಏನಾದರೂ ಬರೆಯುವುದಕ್ಕೆ ಶುರುಮಾಡಿದರೆಂದರೆ ಅದಕ್ಕೆ ಕಾರಣ ಶ್ರೀಕಂಠಯ್ಯನವರು. ರಾಜಕೀಯ ದೃಷ್ಟಿಯಿಂದಲೂ ಅವರು ಮಾಡಿದ ಉಪಕಾರ ದೊಡ್ಡದೇ. ಮೈಸೂರು ಮಹಾರಾಜರ ಕೃಪಾಛತ್ರದ ಆಶಯದಲ್ಲಿ ಒಂದಾಗಬೇಕೆಂದರು.

"ಕನ್ನಡದಲ್ಲಿ ಶಾಸ್ತ್ರಗಳ ಬರವಣಿಗೆ ತುಂಬ ಬರಬೇಕು. ಹೊಸ ಹೊಸ ಪದಗಳು, ನುಡಿಗಟ್ಟೂ ಬೇಕು. ನಮ್ಮ ನಾಡಿನ ವಿದ್ಯಾವಂತರೆಲ್ಲಾ ಕನ್ನಡ, ಸಂಸ್ಕೃತ, ಇಂಗ್ಲಿಷ್ ಕಲಿಯಬೇಕು. ಕನ್ನಡದ ಮಹಾನದಿ ತುಂಬಿ ಹರಿಯ ಬೇಕಾದರೆ ಅದಕ್ಕೆ ಉಪನದಿಗಳು ಬೇಕು. ನಾವು ಕೂಡಿ ಸಹಕರಿಸಿ ವಿಶ್ವದ ಜ್ಞಾನವನ್ನೆಲ್ಲ ವಶಪಡಿಸಿಕೊಳ್ಳೋಣ. ಕೆಲಸ ಮುಗಿಯಿತೆಂದು ಯಾವತ್ತೂ ಅಂತೇವೋ ಅವತ್ತು ಮೃತ್ಯು ಬಂತು ಅಂತಲೇ ಲೆಕ್ಕ. ಅಮರತ್ವ ಎಂದರೆ ಸದಾ ಸತ್ಯ, ಸೌಂದರ್ಯ, ಅದು ನಮ್ಮ ಮನಸ್ಸಿನಲ್ಲಿ ಸದಾ ಜೀವಂತವಾಗಿರಬೇಕು" ಎಂದು ಬಿ.ಎಂ.ಶ್ರೀ ಒಮ್ಮೆ ಧಾರವಾಡದಲ್ಲಿ ಭಾಷಣ ಮಾಡಿದ್ದುಂಟು. ಆಗಾಗ ಸಾಹಿತ್ಯ ಭಾಷಣಗಳ ಮೂಲಕ ಕನ್ನಡಿಗರನ್ನು ಎಚ್ಚರಿಸಿ ಅವರಲ್ಲಿ ಭಾಷಾಭಿಮಾನ ಸೃಷ್ಟಿಸಿ ಉಕ್ಕಿಸಿದರು.

**೭. ಡಾ. ಕೆ.ವಿ.ಪುಟ್ಟಪ್ಪ : ೨೯–೧೨–೧೯೦೪ – ೧೧–೧೧–೧೯೯೪**

"ಬಿ.ಎಂ.ಶ್ರೀ. ಮೈಸೂರು ಮಹಾರಾಜರ ಕಾಲೇಜಿನಲ್ಲಿ ಇಂಗ್ಲಿಷ್ ಪ್ರೊಫೆಸರ್ ಆಗಿದ್ದಾಗ ನಾನು ಅವರ ಶಿಷ್ಯನಾಗಿ ಇಂಗ್ಲಿಷ್ ಸಾಹಿತ್ಯದಲ್ಲಿ ಅಪಾರ ಒಲವು,

ಅಭಿಮಾನ ಬೆಳೆಸಿಕೊಂಡಿದ್ದೆ. ಕಾಲೇಜಿನ ಕರ್ನಾಟಕ ಸಂಘದಲ್ಲಿ ಅವರ ರನ್ನನ 'ಗದಾಯುದ್ಧ ನಾಟಕ'ದ ಬಗ್ಗೆ ನೀಡಿದ ಉಪನ್ಯಾಸ ಕೇಳಿದ ಮೇಲೆ ನನ್ನ ಗಮನ ಕನ್ನಡದ ಸಾಹಿತ್ಯದ ಕಡೆಗೆ ತಿರುಗಿತು. ಅವರು ತಮ್ಮ ಕನ್ನಡತನದ ತೇಜಸ್ಸನ್ನು ಸಾವಿರಾರು ಹೃದಯಗಳಲ್ಲಿ ಹರಿಬಿಟ್ಟಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಅವರ ಕೊಡುಗೆ ಅಪಾರ, ಅಪೂರ್ವ, 'ಇಂಗ್ಲಿಷ್ ಗೀತಗಳು, ಅಶ್ವತ್ಥಾಮನ್' 'ರಜತ ಮಹೋತ್ಸವ ಪ್ರಗಾಥ'-ಒಂದೊಂದೂ ಕನ್ನಡ ನವೋದಯಕ್ಕೆ ಹಾದಿ ತೋರಿದ ಕೃತಿಗಳು. ಹಿರಿಯರ ಹಿರಿಮೆ ಅವರು ತಮ್ಮ ಹಿಂದೆ ಬಿಟ್ಟುಹೋಗುವ ಕೃತಿಗಳಿಗಿಂತಲೂ ಹಿರಿದಾದುದು. ಅವರ ವಿಚಾರದಲ್ಲಿ ಅದು ಬಹಳ ಸತ್ಯವೆಂದು ನನ್ನ ಭಾವನೆ. ಅವರು ಸಂಕಲ್ಪಿಸಿದ್ದ ಕೃತಿಗಳನ್ನು ಕೈಗೂಡಿಸಿರುವ ಕೃತಿಗಳಿಗೆ ಹೋಲಿಸಿದರೆ ಆ ಮಾತು ಮತ್ತೂ ಅರ್ಥವಾಗುತ್ತದೆ.

'ಷೇಕ್ಸ್‌ಪಿಯರ್ ನಾಟಕಗಳನ್ನೆಲ್ಲ ಕನ್ನಡಕ್ಕೆ ಇಳಿಸಬೇಕು, ಗ್ರೀಕ್ ನಾಟಕಗಳನ್ನು ಭಾಷಾಂತರಿಸಬೇಕು, ಕರ್ನಾಟಕವನ್ನು ಮತ್ತೆ ಕೂಡಿಸಬೇಕು. ಕರ್ನಾಟಕಕ್ಕೊಂದು ವಿಶ್ವವಿದ್ಯಾನಿಲಯ ಸ್ಥಾಪಿಸಬೇಕು, ಕನ್ನಡ ಎಲ್ಲೆಲ್ಲಿಯೂ ವೈಭವದಿಂದ ಮೆರೆಯಬೇಕು, ಅದಕ್ಕೆ ಎಲ್ಲರ ಮನ್ನಣೆ ದೊರಕುವಂತಾಗಬೇಕು. ಒಂದೇ, ಎರಡೇ ಅವರ ಹೊಂಗನಸುಗಳು, ಆ ಹೆಗ್ಗನಸುಗಳು! ನೂರಾರು!

"ಕನ್ನಡ ಭಾಷೆ ಅತ್ಯುನ್ನತ ಸ್ಥಿತಿಯಲ್ಲಿದ್ದು, ಕೆಲಕಾಲ ಮರೆಯಾಗಿದ್ದು ಅನಂತರ ಅದರ ನವೋದಯಕ್ಕೆ ಈಚೆಗೆ ಸುಮಾರು ಐವತ್ತು ವರ್ಷಗಳುಂಟಾಗಿ ಒಂದು ಘಟ್ಟಕ್ಕೆ ಬಂದಿದೆಯೆನ್ನಬಹುದು. ನಮ್ಮಲ್ಲಿ ಈ ನೂತನ ದೃಷ್ಟಿಯನ್ನುಂಟು ಮಾಡಿದವರು ರಾಜಸೇವಾಸಕ್ತ ಪ್ರೊ.ಬಿ.ಎಂ.ಶ್ರೀಕಂಠಯ್ಯನವರು. ಅವರಿಗೆ ನಾವೆಲ್ಲಾ ಚಿರಋಣಿಗಳು.

೬-೭-೧೯೪೧ ರಂದು ಮಲ್ಲೇಶ್ವರದ ಶ್ರೀರಾಮ ಭಜನದ ಮಂದಿರದ ಸಭಾಂಗಣದಲ್ಲಿ ಬೆನಗಲ್ ರಾಮರಾಯರ ಅಧ್ಯಕ್ಷತೆಯಲ್ಲಿ ಕೆ.ವಿ.ಪುಟ್ಟಪ್ಪನವರು ಮಾಡಿದ ಉಪನ್ಯಾಸದಲ್ಲಿ ಮೇಲ್ಕಂಡ ಮಾತುಗಳನ್ನು ಹೇಳಿದ್ದಾರೆ.

**೮. ಗೊರೂರು ರಾಮಸ್ವಾಮಿ ಐಯ್ಯಂಗಾರ್:** ೪-೭-೧೯೦೪, ೨೮-೯-೧೯೯೧

ಬಿ.ಎಂ.ಶ್ರೀ. ಇಂಗ್ಲಿಷ್ ಮತ್ತು ಕನ್ನಡ ಸಾಹಿತ್ಯದ ಅತ್ಯಧಿಕ ಪ್ರೇಮಿ. ಈ ಎರಡೂ ಭಾಷೆಗಳಲ್ಲಿ ಹಲವಾರು ಘಂಟೆಗಳ ಕಾಲ ನಿರರ್ಗಳವಾಗಿ ಭಾಷಣ ಮಾಡುತ್ತಿದ್ದರು. ಸಾಹಿತಿಗಳ ಮನೆಗಳಲ್ಲಿ ಸಾಹಿತ್ಯಕೂಟ ಏರ್ಪಡಿಸಿ, ಗ್ರಂಥಗಳ ಗುಣದೋಷಗಳನ್ನು ಚರ್ಚಿಸಿ ಉತ್ತಮ ಸಲಹೆಗಳನ್ನು ಕೊಡುತ್ತಿದ್ದರು. ಅವರಿಂದ ಸ್ಫೂರ್ತಿ ಪಡೆದ ನನಗೆ ಅವರು ಗುರು ಸಮಾನರು 'ನನ್ನ ಹಳ್ಳಿಯ ಚಿತ್ರಗಳು'

ಗ್ರಂಥವನ್ನು ಮೆಚ್ಚಿಕೊಂಡು ಅದರ ಹಲವಾರು ಪ್ರತಿಗಳನ್ನು ಖರೀದಿಸಿ ಇತರರಿಗೆ ಕೊಡಬೇಕಾಗುತ್ತದೆ' ಎಂದು ಹೇಳಿದರು.

**೯. ಪು.ತಿ.ನರಸಿಂಹಾಚಾರ್: ೧೭-೩-೧೯೦೫, ೧೨-೧೦-೧೯೯೮**

"ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ.ತರಗತಿಯಲ್ಲಿ ಓದುತ್ತಿದ್ದಾಗ ಆಚಾರ್ಯರು ನನಗೆ ಇಂಗ್ಲಿಷ್ ಪದ್ಯಗಳ ಬೋಧಕರಾಗಿದ್ದರು. ಅವರ ಬೋಧನೆಯಿಂದ ವರ್ಡ್ಸ್‌ವರ್ತ್ ಮತ್ತು ಬ್ರೌನಿಂಗ್ ಕವಿಗಳ ಕಾವ್ಯಸೌಂದರ್ಯದ ಅರಿವನ್ನು ಪಡೆದೆ.

ಅವರು ಉಪನ್ಯಾಸಗಳ ಮೂಲಕ ವಿಶಾಲವಾದ ಹೊಸ ಪ್ರಪಂಚವನ್ನೆ ನಮ್ಮ ಮುಂದೆ ತೆರೆದಿಟ್ಟರು. ಕನ್ನಡ ಛಂದಸ್ಸಿನ ಬಗ್ಗೆ ಅವರು ನೀಡಿದ ಮೂರು ಅಮೋಘವಾದ ಪ್ರವಚನಗಳನ್ನು ಕೇಳಿ ವಿಸ್ಮಯವಾದುದು ನೆನಪಿನಲ್ಲಿದೆ. 'ಕಿರಿಯ ಕಾಣಿಕೆ ಎಂಬ ಪದ್ಯ ಸಂಕಲನವನ್ನು ಆಚಾರ್ಯರಿಗೆ ಅರ್ಪಿಸಿದ. ತರುಣ ಕವಿಗಳ ಪೈಕಿ ನಾನೊಬ್ಬನಾಗಿದ್ದೆ. ಅವರು ನನ್ನ ಪದ್ಯಗಳನ್ನು ಮೆಚ್ಚಿಕೊಂಡು ಪ್ರೋತ್ಸಾಹಿಸಿದರು.

ವಿದ್ಯಾರ್ಥಿಯಾಗಿದ್ದಾಗ ನಾನು ಅವರನ್ನು ಪ್ರತ್ಯೇಕವಾಗಿ ಮನೆಯಲ್ಲಿ ಕಂಡದ್ದು ನೆನಪಿಲ್ಲ. ಗೋಷ್ಠಿಗಳಲ್ಲಿ, ಸಭೆಗಳಲ್ಲಿ ನೋಡಿದ್ದಷ್ಟೇ ನೆನಪು. ಕನ್ನಡದ ದೈನ್ಯತೆಯನ್ನು ತೊಲಗಿಸಿ ತೇಜಗೊಳಿಸಿ ಪೋಷಿಸಿದ ಹಿರಿಯರಲ್ಲಿ ಪ್ರಮುಖ ರಾದವರು ಆಚಾರ್ಯರು. ಅವರು ಸಂಸ್ಕೃತವನ್ನು ಹಲವಾರು ಮಂದಿ ತಿಳಿದಿರುವಂತೆ ದ್ವೇಷಿಸಿದವರಲ್ಲ. ದ್ವೇಷಿಸಿದ್ದರೆ ಆ ಭಾಷೆಯನ್ನು ಕಲಿಯುತ್ತಿರಲಿಲ್ಲ, ಕಲಿಯಿರಿ ಎಂದು ಇತರರಿಗೆ ಹೇಳುತ್ತಿರಲಿಲ್ಲ. ಆದರೆ ಆ ಭಾಷೆ ಕನ್ನಡ ಸಾಹಿತ್ಯದ ಸರ್ವತೋಮುಖವಾದ ಬೆಳವಣಿಗೆಗೆ ಕಂಟಕವಾಗುವುದನ್ನು ಮಾತ್ರ ಸಹಿಸುತ್ತಿರಲಿಲ್ಲ. ತಮಿಳು ಸುಂದರವಾದ ಭಾಷೆ ಎನ್ನುವುದನ್ನು ನಾವು ಅವರಿಂದ ಕಲಿತೆವು. ಇಂಗ್ಲಿಷ್ ಭಾಷೆಯಲ್ಲಂತೂ ಅವರು ಪರಂಗಿ ಪ್ರಾಧ್ಯಾಪಕರ ಹೆಗರೆಣೆಯಾಗಿ ಮೀರಿಯೂ ಸಹ ನಿಂತು, ತಮ್ಮ ವಿದ್ವತ್ತಿನಿಂದಲೂ ಅಸಲಿತವಾದ ವಾಗ್ಝರಿ ಯಿಂದಲೂ ಎಲ್ಲರ ಮನಸ್ಸನ್ನು ಸೂರೆಗೊಳ್ಳುತ್ತಿದ್ದರು. ಇಂಥ ವಿದ್ವಾಂಸರು ಕನ್ನಡಕ್ಕೆ ಬಂದುದರಿಂದ ಅದಕ್ಕೆ ಅತಿಶಯವಾದ ಮನ್ನಣೆ, ಮಮತೆಗಳು ವಿದ್ಯಾರ್ಥಿಗಳಿಂದ ದೊರೆತವು.

ಕನ್ನಡ ಭಾಷೆ ಬಹು ಸಮೃದ್ಧವಾದ ಭಾಷೆ. ಅದರ ಸಾಹಿತ್ಯಕ್ಕೆ ಶತ ಶತಮಾನಗಳ ಇತಿಹಾಸವುಂಟು. ಕನ್ನಡಿಗರು ಪ್ರಯತ್ನ ಪಟ್ಟರೆ ಅದನ್ನು ಇಂಗ್ಲಿಷ್

ಮಟ್ಟಕ್ಕೆ ತರಬಹುದು. ಜಗತ್ತಿನ ಕಣ್ಣನ್ನು ಈ ನಾಡಿನತ್ತ ತಿರುಗಿಸುವುದು ಮಾತ್ರವಲ್ಲ, ಕೋರೈಸಲೂಬಹುದು ಎಂಬುದು ಅವರ ಆಕಾಂಕ್ಷೆಯಾಗಿತ್ತು. ಕನ್ನಡದಲ್ಲಿ ಅವರದು ಅನನ್ಯವಾದ ಪಾಂಡಿತ್ಯ, ಅತಿಶಯವಾದ ಮಮತೆ.

'ಶ್ರೀ'ಯವರ ಮುಖ್ಯವಾದ ಕೊಡುಗೆ ಕನ್ನಡ ಕಾವ್ಯಕ್ಕೆ ಅವರು ತಂದ ಛಂದೋ ವೈವಿಧ್ಯತೆ ಷಟ್ಪದಿಗಳ ಸ್ಥಿರ ರೂಪಗಳನ್ನು ಸಣ್ಣ ಸಣ್ಣ ಕಟ್ಟಡಗಳಿಗೆ ಅನುಕೂಲವಾಗುವಂತೆ ಒಡೆದರು ಸರಳ ರಗಳೆ ಮತ್ತು ರಗಳೆಗಳ ಹೊಸ ಹೊಸ ರಚನೆಗಳನ್ನು ಸೃಷ್ಟಿಸಿದರು. ಅಂಶಗಳತ್ತ ನಮ್ಮ ಗಮನ ಸೆಳೆದರು. ಮೂರು+ಐದು ಮಾತ್ರೆಗಳ, ಎರಡು+ನಾಲ್ಕು ಮಾತ್ರೆಗಳ ಛಂದಸ್ಸು, ಅವರಿಂದ ನಮಗೆ ಲಭ್ಯವಾಯಿತು.

'ಅಶ್ವತ್ಥಾಮನ್' ನಾಟಕದಲ್ಲಿ ಬರುವ ಛಂದೋ ರೂಪಗಳು, ಅವುಗಳನ್ನು ಮೇಳಗೀತೆಗಳಲ್ಲಿ ಹಾಗೂ ಪಾತ್ರಗಳ ಸಂಭಾಷಣೆಗಳಲ್ಲಿ ಬಳಸಿರುವ ಸೊಬಗು ಅತ್ಯಾಶ್ಚರ್ಯಕರವಾಗಿದೆ. ಕವಿಯ ಕಾವ್ಯದ ಜೀವ, ಅದರ ಛಂದಸ್ಸಿನ ರೀತಿ ನೀತಿ ಲವಲವಿಕೆಯಲ್ಲಡಗಿದೆ. ಈ ಲವಲವಿಕೆಯನ್ನು ನಮ್ಮ ಮನೆಗೆ ಮುಟ್ಟಿಸಿದವರಲ್ಲಿ ಅವರು ಪ್ರಧಾನರು.

ಮಗುವಿನಂಥ ಮನಸ್ಸು ಅವರದು. ಸರಸ ಸಹೃಹಸ್ಥ ಅತಿಥೇಯರು ಅವರನ್ನು ನೆನೆದರೆ ಮನಸ್ಸು ಗೌರವ ಭಾವದಿಂದ ತುಂಬುತ್ತದೆ, ಹೃದಯ ಆರ್ದ್ರವಾಗುತ್ತದೆ.

**೧೦. ಪ್ರೊ. ಎಂ.ವಿ.ಸೀತಾರಾಮಯ್ಯ: ೯-೯-೧೯೧೦ - ೧೨-೩-೧೯೯೦**

"ಬಿ.ಎಂ.ಶ್ರೀ. ಮಹಾ ಮೇಧಾವಿಗಳು, ಉಭಯ ಭಾಷಾ ವಿಶಾರದರು. ಉಭಯ ವ್ಯಾಕರಣ ಪಂಡಿತರಾಗಿದ್ದ ಕಾನಕಾನಹಳ್ಳಿ ವರದಾಚಾರ್ಯರ ಶಿಷ್ಯರು. ಅವರ ಶಿಷ್ಯರಾದವರಿಗೆ ಯಾರಿಗೂ ಪ್ರಾಚೀನ ಕನ್ನಡ ಕಾವ್ಯದ ಬಗ್ಗೆ ಅಭಿಮಾನ ಹುಟ್ಟದೆ ಇರುತ್ತಿರಲಿಲ್ಲ. ಅವರ ಹಳೆಗನ್ನಡ ಕಾವ್ಯ ಪ್ರೌಢಿಮೆ ವಿಸ್ತಾರವಾಗಿತ್ತು. ಹಳೆಗನ್ನಡವನ್ನು ಸ್ವತಃ ಅಭ್ಯಾಸ ಮಾಡಿ ಹಳೆಗನ್ನಡ ಕಾವ್ಯವನ್ನು ಓದಬೇಕು ಎಂದು ಲೇಖನಗಳು, ಭಾಷಣಗಳ ಮೂಲಕ ತಿಳಿಸುತ್ತಿದ್ದರು.

ಅನೇಕರು ಆರೋಪಿಸಿದ್ದಂತೆ ಬಿ.ಎಂ.ಶ್ರೀ. ಸಂಸ್ಕೃತ ದ್ವೇಷಿಯಲ್ಲ. ಯಾಕೆಂದರೆ ಪ್ರತಿಯೊಬ್ಬ ವಿದ್ಯಾವಂತನೂ ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳನ್ನು ಕಲಿಯಬೇಕೆಂದು ಹೇಳುತ್ತಿದ್ದರು. ಸಂಸ್ಕೃತ ನಮ್ಮ ಪೂರ್ವಿಕರಾದ ಆರ್ಯರ ಭಾಷೆ. ಇದರಲ್ಲಿ ನಮ್ಮ ಪುಸ್ತಕ ಭಂಡಾರವೆಲ್ಲ ಅಡಗಿದೆ. ಇದನ್ನು ತಿಳಿದ ಹೊರತು ಹಿಂದಿದ್ದ ಸ್ಥಿತಿಯಾಗಲಿ ಈಗಿನ ಸ್ಥಿತಿಗೆ ಕಾರಣವಾಗಲಿ

ಮುಂದೆ ತಿದ್ದಬೇಕಾದ ರೀತಿಯಾಗಲಿ ತಿಳಿಯುವುದಿಲ್ಲ. ಆದ್ದರಿಂದ ಇಂಡಿಯಾ ದಲ್ಲಿ ವಿದ್ಯಾವಂತನೆನ್ನುವವ ಈ ಮೂರೂ ಭಾಷೆಗಳನ್ನು ತಿಳಿದಿರಬೇಕು. ತನಗೆ ಹರ್ಷವೂ ಲಾಭವೂ ದೇಶಕ್ಕೆ ಉನ್ನತಿಯೂ, ಸೌಖ್ಯವೂ, ಬರುವಂತೆ ಶ್ರಮ ಬಾಳಬೇಕೆನ್ನುವವನಿಗೆ ಈ ಮೂರೂ ಬಂದೇ ತೀರಬೇಕು.

ವಿಶ್ವದಲ್ಲಿರುವ ಎಲ್ಲಾ ಮುಖ್ಯ ಭಾಷೆಗಳಿಂದಲೂ ಶ್ರೇಷ್ಠ ಗ್ರಂಥಗಳನ್ನು ಭಾಷಾಂತರಿಸಿ ಕನ್ನಡದ ಬೊಕ್ಕಸವನ್ನು ತುಂಬಿಕೊಳ್ಳಬೇಕಾಗಿದೆ. ಈ ಭಾಷಾಂತರ ಕಾಯಕವನ್ನು ಕುರಿತು ಹೇಳುತ್ತಾ 'ಶ್ರೀ'ಯವರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಅತ್ಯಂತ ಗಮನಾರ್ಹವಾದುದ್ದು. ಸಂಸ್ಕೃತದ ವಿದ್ವಾಂಸರು ನಿಸ್ಸಾರವಾದ ಕಾವ್ಯ ನಾಟಕಗಳ ಭಾಷಾಂತರಗಳನ್ನು ಬಿಟ್ಟು ಭಾರತ, ಭಾಗವತ, ರಾಮಾಯಣ, ಶೃತಿ, ಸ್ಮೃತಿ, ಪುರಾಣ, ಉಪನಿಷತ್ತು, ಅನ್ಯಮತಗಳ ತತ್ವಗಳನ್ನು ನಿಷ್ಪಕ್ಷಪಾತವಾಗಿ ಭಾಷಾಂತರ ಮಾಡಿಕೊಟ್ಟರೆ ಜನಗಳ ಜ್ಞಾನೋದಯ, ಕನ್ನಡ ಕಾವ್ಯಮಾಲೆ ಸಮೃದ್ಧವಾಗುತ್ತದೆ.

ಭಾಷಣಕಲೆ 'ಶ್ರೀ' ಯವರ ಅಡಿಯಾಳು, ಅಷ್ಟು ಪ್ರಚಂಡ ವಾಗ್ಮಿ, ಅವರ ಭಾಷಣವೆಂದರೆ ಸಿದ್ಧವಾಗಿರುವ ರಸದೌತಣದೂಟ. ಕನ್ನಡದ ಪುರೋಭಿವೃದ್ಧಿಯನ್ನೇ ತಮ್ಮ ಜೀವನದುಸಿರು ಎಂದು ಭಾವಿಸಿದ್ದರು. ಬಾಹ್ಯಾಡಂಬರದ ಕಾರ್ಯಾಚರಣೆ, ಮೂರ್ತಿಪೂಜೆ ಮುಂತಾದವುಗಳನ್ನೆಲ್ಲ ತೊರೆದಿದ್ದರೂ ಆರ್ಷೇಯವಾದ ಸನಾತನ ಧರ್ಮದಲ್ಲಿ ಶ್ರದ್ಧೆಯುಳ್ಳವರಾಗಿದ್ದರು. ಕರ್ಮ ಸಿದ್ಧಾಂತದಲ್ಲಿ ನಂಬಿಕೆಯಿತ್ತು. ಜೈನ, ವೈದಿಕ, ವೀರಶೈವ, ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ್ದ ಅವರಿಗೆ ಧರ್ಮ ಸಮನ್ವಯ ದೃಷ್ಟಿ ಕುದುರಿತ್ತು. ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಕೆಲವು ಮಠಾಧಿಪತಿಗಳನ್ನು ಕರೆಸಿ ಉಪನ್ಯಾಸಗಳನ್ನು ಏರ್ಪಡಿಸಿದ್ದರು.

**೧೧. ಎನ್.ಅನಂತ ರಂಗಾಚಾರ್: ಜನನ : ೨೩-೫-೧೯೦೬ ಮರಣ:೯-೮-೧೯೮೬**

"ಬಿ.ಎಂ.ಶ್ರೀ. ಬಿ.ಎ. ತರಗತಿಯಲ್ಲಿ ನನಗೆ ಗುರುಗಳಾಗಿದ್ದು ನಾಟಕ ಬೋಧಿಸುತ್ತಿದ್ದರು. ತುಂಬ ಗಂಭೀರ ಸ್ವಭಾವದ ಅವರು ವಿದ್ಯಾರ್ಥಿಗಳಿಂದ ಶಿಸ್ತು ಮತ್ತು ಗಾಂಭೀರ್ಯವನ್ನು ನಿರೀಕ್ಷಿಸುತ್ತಿದ್ದರು. ಶಕ್ತಿ, ಪಾಂಡಿತ್ಯ, ವಿದ್ವತ್ತು ಇದ್ದಲ್ಲಿ ಗೌರವ ಕೊಡುತ್ತಿದ್ದರು. ಅದಕ್ಕೆ ಸಾಕ್ಷಿ ಗುರುತುಗಳಾಗಿದ್ದ ಪಂಡಿತ ವರದಾಚಾರ್ಯರಲ್ಲಿ ಅವರಿಗಿದ್ದ ಭಕ್ತಿ, ಗೌರವ, ತಮಗಿದ್ದ ಕನ್ನಡದ ಅಭಿಮಾನವನ್ನು ಅವಕಾಶವಾದಾಗಲೆಲ್ಲ ಪ್ರದರ್ಶಿಸುತ್ತಿದ್ದರು, ಅವರ ನಾಟಕಗಳನ್ನು ರಂಗಸ್ಥಳಕ್ಕೆ ಸಿದ್ಧಪಡಿಸುವಾಗ ಅನೇಕ ಸಲ ತಾವೇ ವೇದಿಕೆ ಹತ್ತಿ ಅಭಿನಯಿಸಿ ತೋರಿಸುತ್ತಿದ್ದರು.

ಒಂದು ಸಲ ಚಾಮುಂಡಿ ಬೆಟ್ಟದ ಮೇಲಿರುವ ಲಲಿತಾದ್ರಿಯಲ್ಲಿ, ವ್ಯಾಸಂಗ ಗೋಷ್ಠಿ ಏರ್ಪಡಿಸಿದ್ದಾಗ ಒಂದು ದುರ್ಯೋಧನನ 'ಪಂಪ ಭಾರತ', ಮತ್ತೊಂದು ದಿನ 'ಕನ್ನಡ ಸಾಹಿತ್ಯ ಚರಿತ್ರೆ' ಕುರಿತು ಅವರು ಉಪನ್ಯಾಸ ನೀಡಿ ಕನ್ನಡ ಸಾಹಿತ್ಯದ ಆದಿಕಾಲದ ಚಂಪೂ ಗ್ರಂಥಗಳು, ಅವುಗಳ ಸ್ವರೂಪ, ಕೃಷ್ಣ ಮತ್ತು ದುರ್ಯೋಧನನ ಪಾತ್ರಗಳ ವ್ಯತ್ಯಾಸ ದುರ್ಯೋಧನನ ದುರಂತ ಎಲ್ಲವನ್ನೂ ಕಣ್ಣಿಗೆ ಕಟ್ಟುವಂತೆ ನಿರೂಪಿಸಿದರು.

'ಶ್ರೀ' ವಿದ್ಯಾರ್ಥಿಗಳಿಗೆ ಪಾಠ ಹೇಳುವ ವೈಖರಿಯೇ ಬೇರೆ. ಅವರು ತರಗತಿಯನ್ನು ಪ್ರವೇಶಿಸಿದ ಕೂಡಲೆ ಒಂದು ಮೋಹಕ ವಾತಾವರಣ ಸೃಷ್ಟಿಯಾಗುತ್ತಿತ್ತು. ವಿವರಿಸುವ ಏಕಾರ್ಥದ ಅನೇಕ ಶಬ್ದಗಳ ಸುರಿಮಳೆ ಯಾಗುತ್ತಿತ್ತು. ಮಾತುಗಳು ಭಾವನೆಯಲ್ಲಿ ಮಿಂದು ಹೊರ ಹೊಮ್ಮುತ್ತಿದ್ದವು. ಸಾಹಿತ್ಯದ ಸಂಗಡ ಸಾಮಾಜಿಕ ವಿಚಾರಗಳನ್ನು ಪ್ರಸ್ತಾಪಿಸುತ್ತಿದ್ದರು. ಅವರ ವಾಣಿ ರಸವಾಣಿಯಾಗಿರುತ್ತಿತ್ತು.

**೧೨. ಕೆ.ಎಸ್.ನರಸಿಂಹಸ್ವಾಮಿ: ೨೬-೧-೧೯೧೫, ೨೭-೧೨-೨೦೦೩**

"ಶ್ರೀ ಯವರಂಥ ವಾಗ್ಮಿಗಳು ಮತ್ತೊಬ್ಬರಿಲ್ಲ. ಒಮ್ಮೆ ಮಹಾರಾಜ ಕಾಲೇಜಿನಲ್ಲಿ ನಾಲ್ಕು ಗಂಟೆಗಳ ಕಾಲ ಪಂಪನ "ವಿಕ್ರಮಾರ್ಜುನ ವಿಜಯ", ನಂತರ ವರ್ಧಮಾನ ವಿದ್ಯಾರ್ಥಿನಿಲಯದಲ್ಲಿ ಜೈನರ 'ರತ್ನತ್ರಯ' ಕುರಿತು ಅವರು ಮಾಡಿದ ಭಾಷಣಗಳು ಈಗಲೂ ನನ್ನ ಕಿವಿಯಲ್ಲಿ ಮೊಳಗುತ್ತಿವೆ. ನನ್ನ ಕವನಗಳನ್ನು ಅವರು ಮೆಚ್ಚಿ ಪ್ರೋತ್ಸಾಹಿಸಿದರು."

**೧೩. ಆರ್.ವಿ. ಮೂರ್ತಿ : ೧೨-೧೧-೧೯೦೬, ೨೬-೭-೧೯೯೧.**

ನಾನು ಪ್ರೌಢಶಾಲೆಯ ವಿದ್ಯಾಭ್ಯಾಸ ಮುಗಿಸಿ ಬೆಂಗಳೂರಿನಲ್ಲಿ ಇಂಟರ್ ಮೀಡಿಯಟ್ ವ್ಯಾಸಂಗ ಮಾಡುತ್ತಿದ್ದಾಗ ೧೯೩೦ರಲ್ಲಿ ಬಿ.ಎಂ.ಶ್ರೀ. ಸೆಂಟ್ರಲ್ ಕಾಲೇಜಿಗೆ ಇಂಗ್ಲಿಷ್ ಉಪನ್ಯಾಸಕರಾಗಿ ಬಂದರು. ಬಂದರು, ನೋಡಿದರು, ವಿದ್ಯಾರ್ಥಿಗಳ ಹೃದಯವನ್ನು ಗೆದ್ದರು. ಕನ್ನಡ ಸ್ನಾತಕೋತ್ತರ ತರಗತಿಗಳನ್ನು ತೆರೆಯಲಾಗಿ ಗೌರವ ಪ್ರಾಧ್ಯಾಪಕರಾದರು. ಕನ್ನಡದ ವಿದ್ಯಾರ್ಥಿಗಳಿಗೆ ಅತ್ಯಂತ ಉಪಯುಕ್ತವಾದ 'ಕನ್ನಡ ಕೈಪಿಡಿ'ಯನ್ನು ತಮ್ಮ ನೇತೃತ್ವದಲ್ಲಿ ವಿದ್ವಾಂಸರಿಂದ ಬರೆಸಿದರು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ 'ಕನ್ನಡ ಗ್ರಂಥ ಮಾಲೆ' ಪ್ರಾರಂಭಿಸಿ ವಿದ್ವಾಂಸರಿಂದ ನಡುಗನ್ನಡ ಕಾವ್ಯಗಳನ್ನು ಪೀಠಿಕೆ, ಶಬ್ದಕೋಶಗಳೊಡನೆ ಶುದ್ಧ

ಪಾಠಗಳನ್ನೊಳಗೊಂಡ ಸಂಗ್ರಹ ಹಾಗೂ ಆಧುನಿಕ ಜ್ಞಾನ ಪ್ರಸಾರಕ್ಕೆ ಅನುಕೂಲವಾದ ಗ್ರಂಥಗಳನ್ನು ಕನ್ನಡದಲ್ಲಿ ಬರೆಯಿಸಿ ಪ್ರಕಟಿಸಿದರು. ನಿವೃತ್ತಿಯಾಗುವವರೆಗೆ ಗ್ರಂಥಮಾಲೆಯ ಅಧ್ಯಕ್ಷರಾಗಿದ್ದು ಅಮೂಲ್ಯವಾದ ಗ್ರಂಥಗಳ ಪ್ರಕಟಣೆಗೆ ಕಾರಣರಾದರು.

'ಶ್ರೀ' ಯವರ ಪ್ರವಚನ ರೀತಿಯೇ ಅದ್ಭುತವಾದುದು. ಅವರು ನಾಟಕವನ್ನೂ, ಕವನವನ್ನೂ ಇಲ್ಲವೆ ಇನ್ಯಾವ ಕವಿಯ ಕೃತಿಯನ್ನಾಗಲಿ ಬೋಧಿಸುತ್ತಿದ್ದರೆ ಶ್ರೋತೃಗಳಿಗೆ ಕಾಲ ನಿಂತಂತೆ ಭಾಷವಾಗುತ್ತಿತ್ತು. ಆಗಾಗ ಅಪೂರ್ವ ಪದಗಳ ಅಮೂಲಾಗ್ರ ವಿವರಣೆಗೆ ತೊಡಗುತ್ತಿದ್ದರು. ಕವಿಯ ವಿಷಯ, ಕಾವ್ಯದ ಹಿನ್ನಲೆ ಇವುಗಳನ್ನು ವಿವರಿಸಿ ಒಂದು ನಿಮಿಷ ಕಣ್ಮುಚ್ಚಿ ಕವನ ಅಥವಾ ಕೃತಿಯ ವಾಚನದಿಂದಲೆ ಶ್ರೋತೃಗಳಿಗೆ ಅರ್ಥವಾಗುವಂತೆ ಮಾಡುತ್ತಿದ್ದರು. ಒಂದು ನೋಟದಲ್ಲಿ ಸಮಗ್ರ ಕಾವ್ಯವೊಂದನ್ನು ಪರಿಚಯ ಮಾಡಿಕೊಡುವುದು ಅವರ ಪದ್ಧತಿಯಾಗಿತ್ತು.

'ಶ್ರೀ'ಯವರು ಮೂರು ದಶಕಗಳ ಕಾಲ ಸಾಹಿತ್ಯ ಸಾರ್ವಭೌಮರಾಗಿ ಮೆರೆದರು. ಕನ್ನಡದ ಪ್ರಚಾರಕ್ಕಾಗಿ ತಾವು ಹೋದಲೆಲ್ಲಾ ಕನ್ನಡ ಸಂಘಗಳನ್ನು ಸ್ಥಾಪಿಸಿದರು. ಭಾಷಣಗಳಿಂದ ಕನ್ನಡಿಗರನ್ನು ಎಚ್ಚರಿಸಿದರು. ಕನ್ನಡವೆಂದರೆ ಮೂಗು ಮುರಿಯುತ್ತಿದ್ದ ಕಾಲದಲ್ಲಿ ಕನ್ನಡಕ್ಕೆ ಗೌರವ ತಂದರು. 'ಇಂಗ್ಲಿಷ್ ಗೀತಗಳು, ಗದಾಯುದ್ಧ ನಾಟಕ' ಅವರಿಗೆ ಕೀರ್ತಿ ತಂದುಕೊಟ್ಟ ಕೃತಿಗಳು.

ಸಹಸ್ರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದರು. ಕನ್ನಡ ಪಡೆಯನ್ನೆ ಸೃಷ್ಟಿಸಿದರು. "ಶ್ರೀ"ಕಾರ ಬರೆದರು ಕನ್ನಡದ ಕಣ್ವರು, ಆಕಾರವಾದೆವು ನಾವು" ಎಂದು ನುಡಿದಿರುವ ಕವಿಯ ಮಾತು ನೂರಕ್ಕೆ ನೂರು ಸತ್ಯ"

**೧೪. ರಾ.ಯ.ಧಾರವಾಡಕರ್** : ೧೫-೭-೧೯೧೯, ೧೨-೪-೧೯೯೧.

'ಶ್ರೀಯವರ ಉಪನ್ಯಾಸಗಳನ್ನು ಕೇಳಿದಷ್ಟೂ ಮತ್ತೆ ಮತ್ತೆ ನಮಗೆ ಕೇಳಬೇಕೆನಿಸುತ್ತಿತ್ತು. ಅವರ ಭಾಷೆಯ ಸೊಗಸು, ಶೈಲಿ, ಹೇಳುವ ರೀತಿ, ವಿವರಗಳ ವಿನ್ಯಾಸ ಬೇರೆ ರೀತಿಯದು. ಪರೀಕ್ಷೆಗೆ ಅವರು ಹೆಚ್ಚಿನ ಮಹತ್ವ ಕೊಡುತ್ತಿರಲಿಲ್ಲ. ವಿದ್ಯಾರ್ಥಿಗಳನ್ನು ಪರೀಕ್ಷೆಗೆ ಸಿದ್ಧಗೊಳಿಸುವುದಕ್ಕಿಂತ ಹೆಚ್ಚು ಕವಿಗಳನ್ನು, ಲೇಖಕರನ್ನು, ವಿಮರ್ಶಕರನ್ನು ನಿರ್ಮಿಸಿದರು. ಸ್ವತಃ ಕವಿಗಳಾಗಿದ್ದು ಅನೇಕ ಕವಿಗಳ ನಿರ್ಮಾಪಕರಾಗಿದ್ದರು.

ಕರ್ನಾಟಕದ ಏಕೀಕರಣ, ಸಮಸ್ತ ಕನ್ನಡಿಗರ ಭಾವೈಕ್ಯತೆ 'ಶ್ರೀ'ಯವರ ಉಸಿರಾಗಿತ್ತು. ಕೇಳಿದವರಿಗೆಲ್ಲ ಮುನ್ನುಡಿ ಬರೆದುಕೊಟ್ಟು ಒಳ್ಳೆಯ ಮಾತುಗಳ

ನ್ನಾಡುತ್ತಿದ್ದರು. 'ಬರೆಯುವವರ ಬಗ್ಗೆ ಕೆಟ್ಟ ಮಾತನ್ನಾಡಬಾರದು. ಆ ವ್ಯಕ್ತಿಯಲ್ಲಿ ನಿಜವಾದ ಅಂತಸತ್ವವಿದ್ದರೆ ಅವನು ಪ್ರಯತ್ನವನ್ನು ಮುಂದುವರಿಸುತ್ತಾನೆ. ಇಲ್ಲದಿದ್ದರೆ ಕಮರಿಹೋಗುತ್ತಾನೆ. ಹುಟ್ಟಿದ ಮಗುವಿಗೆ ಜಾತಕ ಬರೆಯಿರಿ ಎಂದರೆ ನಾನು ಮರಣದಿನವನ್ನು ಹೇಳುವುದೆ? ಮಗು ಬದುಕಲಿ, ಬೆಳೆಯಲಿ' ಎಂದು ಅವರು ಹೇಳುತ್ತಿದ್ದರು.

**೧೫. ಎಸ್.ವಿ.ಪರಮೇಶ್ವರ ಭಟ್ಟರು: ೮-೨-೧೯೧೪ ೨೭-೧೦-೨೦೦೦**

"ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯನವರು ಮೈಸೂರು ವಿಶ್ವವಿದ್ಯಾನಿಲಯ ದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಕನ್ನಡದ ಗೌರವದ ಪ್ರಾಧ್ಯಾಪಕರಾಗಿದ್ದು ಯಶಸ್ವಿಯಾಗಿ ಕಾರ್ಯ ನಿರ್ವಹಿಸಿದ ಸಂಗತಿ ಯಾರಿಗೆ ತಿಳಿಯದು? ಸ್ವಯಂ ಜ್ಞಾನೋಪಾಸಕರಾಗಿ ವಿಶ್ವಸಾಹಿತ್ಯ ಸರ್ವಶ್ರೇಷ್ಠ ಕಾವ್ಯ, ನಾಟಕಗಳನ್ನು, ವಿಮರ್ಶಾತ್ಮಕ ಕೃತಿಗಳನ್ನು ಆಳವಾಗಿ ಅಭ್ಯಾಸ ಮಾಡಿ ಅವುಗಳ ಸತ್ಯ, ಸತ್ವಗಳೆರಡನ್ನೂ ಕನ್ನಡ ಭಾಷಣ, ಲೇಖನಗಳಲ್ಲಿ ಭಟ್ಟಿ ಇಳಿಸಿ ವಿದ್ಯಾರ್ಥಿಗಳಿಗೂ, ವಿದ್ವಾಂಸರಿಗೂ ಉಪಯುಕ್ತವಾದ ರೀತಿಯಲ್ಲಿ ಜ್ಞಾನಾರ್ಜನೆಗೆ ನೆರವು ನೀಡಿದ ಸಾಂಸ್ಕೃತಿಕ ಸಂಬಂಧವಾದ ಕಾರ್ಯದಿಂದ ಕೃತಕೃತ್ಯರಾದ ಈ ಮಹನೀಯರನ್ನು ಮರೆಯುವುದಾದರೂ ಹೇಗೆ?

ಕನ್ನಡದ ಪುನರುಜ್ಜೀವನದ ಕಾರ್ಯದಲ್ಲಿ ಪ್ರವಾಸ ಪ್ರಚಾರಗಳಿಗಾಗಿ ತಮ್ಮ ಜೀವನವನ್ನೆ ಮುಡಿಪಾಗಿಟ್ಟು ನಾಡು ನುಡಿಗಳ ಏಳಿಗೆಗಾಗಿ ದೀಕ್ಷಾಬದ್ಧರಾಗಿ ನಿಂತ ಈ ಸಾಹಿತ್ಯ ದುರಂತವನ್ನು ನೋಡಿ ಕೇಳಿ ಕಾವ್ಯ ಕಾರ್ಯೋನ್ಮುಖ ರಾಗಬೇಕೆಂದು ರಂಗಕ್ಕಿಳಿದ ಕನ್ನಡದ ಕಡುಗಲಿಗಳ ಸೇನಾವ್ಯೂಹದ ಮುಂಚೂಣಿಯಲ್ಲಿ ನಿಂತ ಈ ನೇತಾರರ ಭವ್ಯವೂ, ಗಂಭೀರವೂ, ಉದಾತ್ತವೂ ಆದ ವ್ಯಕ್ತಿತ್ವ ಯಾರ ಸ್ಮೃತಿಪಟಲದಿಂದ ಅಳಿಸಿಹೋಗುವುದಾದರೂ ಹೇಗೆ?

ಸದ್ದುಗದ್ದಲಗಳಿಗೆ ಆಸ್ಪದ ಕೊಡದಂತಹ ನಿರಹಂಕೆಯಿಂದ ಸೃಜನ ಮತ್ತು ಸೃಜನೇತರ ಕೃತಿಗಳ ರಚನೆಯಲ್ಲಿ ತೊಡಗಿ ಆ ಮೂಲಕ ಕನ್ನಡದ ಸಾರಸ್ವತ ಸಂಪತ್ತನ್ನು ಅತ್ಯತಿಶಯವಾಗಿ ಹೆಚ್ಚಿಸಿರುವ ಕೀರ್ತಿ ಯಾರಿಗೆ ಸಲ್ಲುತ್ತದೆ, ಇವರನ್ನು ಬಿಟ್ಟರೆ? ಕನ್ನಡದ ಹಿಂದಿನ ವೈಭವವನ್ನು ನೆನೆದು ಹಿಗ್ಗಿ ಇಂದಿನ ಅವನತಿಗೆ ಕೊರಗಿ ನಾಳಿನ ನವೋದಯದ ಹೊಂಗನಸನ್ನು ಕಂಡು ಹಿರಿ ಹಿರಿ ಹಿಗ್ಗಿದ ಇವರನ್ನು ಬಿಟ್ಟರೆ ಬೇರೆ ಇವರಂಥ ತಾಯಿನುಡಿ, ತಾಯಿನುಡಿಗೆ ಕಾಳಜಿ ವಹಿಸಿಕೊಂಡವರು ನಮಗೆ ಯಾರು ದೊರೆಯುತ್ತಾರೆ?

ವಿಷಯಗಳ ವಿಶ್ಲೇಷಣೆ, ವಿಷಯಗಳ ಸಂಯೋಜನೆ ನಿರೂಪಣೆಯ ಪುನರಾವರ್ತನ, ಉದ್ಧರಣಗಳ ಸುರಿಮಳೆ ಓತಪ್ರೋತವಾಗಿ ಹರಿದು ಬರುವ ಮಾತಿನ ಸರಣಿ, ಇಲ್ಲಿ ಬತ್ತಿ, ಅಲ್ಲಿ ತೇಲಿಸಿ, ಹೇಗೆಂದರೆ ಹಾಗೆ ಪದಗಳನ್ನು ಕುಣಿಸಿ, ಬಣ್ಣಿಸಿ, ನೆನೆಸಿ, ಹಾಡಿಸಿ ಮಂಟಪ ಮಂಟಪವಾಗಿ ಚಿತ್ರಗಳನ್ನು ಕಟ್ಟುತ್ತಾ ಬಣ್ಣಗಳನ್ನು ಎರಚುತ್ತ ಶೋತೃಗಳಿಗೆ ಮನಂಬುಗೆದಂತೆ ಉಪನ್ಯಾಸ ಗೈಯ್ಯುವ ಚಾತುರ್ಯ 'ಶ್ರೀ' ಯವರಿಗೆ ಮಾತ್ರ ಸಾಧ್ಯ.

'ಕನ್ನಡ ತಾಯಿ ಏಳಬೇಕು, ಬಾಳಬೇಕು, ಆಳಬೇಕು' ಇದು ಅವರ ಮನದಾಸೆ. ಅವರದು ಅಸಾಧಾರಣವಾದ ಪಾಂಡಿತ್ಯ. ಕನ್ನಡ ಸಾಹಿತ್ಯ, ಸಂಸ್ಕೃತಿ, ಕಲೆ, ಧರ್ಮ, ಇತಿಹಾಸಾದಿಗಳ ಹಲವು ಹತ್ತು ಶ್ರೀಮಂತ ಮುಖಗಳನ್ನು ಜನಸಾಮಾನ್ಯರಿಗೆ ಪರಿಚಯ ಮಾಡಿಸಿದರು.

ಒಟ್ಟಿನಲ್ಲಿ ನೃಪತುಂಗ, ಪಂಪ, ಕುಮಾರವ್ಯಾಸ, ಬಸವಣ್ಣನವರ ಮನೋಧರ್ಮಗಳ ಪುರಾಣೀಕೃತ ಮೂರ್ತಿಯಾಗಿ ಮೂಡಿ ಬಂದ ಮಹಾಮೂರ್ತಿ 'ಶ್ರೀ'ಯವರು.

**೧೬. ಪ್ರೊ. ಹೆಚ್.ಎಂ.ಶಂಕರನಾರಾಯಣರಾವ್: ೨೧-೧೧-೧೯೧೩ - ೧೭-೯-೧೯೯೭**

"೧೯೩೦ರ ಮಧ್ಯ ಭಾಗದಲ್ಲಿ 'ಶ್ರೀ'ಯವರು ಸೆಂಟ್ರಲ್ ಕಾಲೇಜಿಗೆ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಬಂದರು. ಅವರ ಆಗಮನ ವಿದ್ಯಾರ್ಥಿ ವೃಂದಕ್ಕೆ ಸಂಭ್ರಮದ ವಿಷಯವಾಗಿತ್ತು. ಅವರ ಪ್ರಯತ್ನದಿಂದ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಸ್ನಾತಕೋತ್ತರ ತರಗತಿಗಳನ್ನು ತೆರೆಯಲಾಯಿತು. ಅವರೇ ಕನ್ನಡದ ಗೌರವ ಪ್ರಾಧ್ಯಾಪಕರಾಗಿ ನಿರ್ವಹಿಸಿದರು.

'ಶ್ರೀ' ವಿದ್ಯಾರ್ಥಿಗಳಿಗೆ ಗೊತ್ತಾದ ಅವಧಿಯಲ್ಲಿ ಪಾಠಗಳನ್ನು ಮುಗಿಸುತ್ತಿದ್ದರು. ಒಂದು ವೇಳೆ ಸಾಧ್ಯವಾಗದಿದ್ದರೆ ವಿಶೇಷ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ಆ ಸಂದರ್ಭದಲ್ಲಿ ಅವರು ವರ್ಡ್ಸ್‌ವರ್ತ್ ಕವಿಯ ಕವನಗಳ ಮೆಲೆ ಅಮೋಘವಾದ ಉಪನ್ಯಾಸ ಮಾಡಿದರು. ಮೂರು ಗಂಟೆಗಳಲ್ಲಿ ಕವಿಯ ಕಾಲ, ಚರಿತ್ರೆ, ಕವನ ರಚನೆಯ ಸಂದರ್ಭಗಳನ್ನು ವಿವರಿಸಿ ನಮ್ಮ ಪರೀಕ್ಷೆಗೆ ಇಟ್ಟಿದ್ದ ಕವನಗಳನ್ನು ವಿವರಿಸಿದರು. ಆ ಉಪನ್ಯಾಸಕ್ಕೆ ಇಂಗ್ಲಿಷ್, ಕನ್ನಡ, ಚರಿತ್ರೆಯ ಉಪನ್ಯಾಸಕರೆಲ್ಲ ಬಂದಿದ್ದರು.

ಸಾರ್ವಜನಿಕ ವೇದಿಕೆಯ ಮೇಲೆ ನಾನು ಕೇಳಿದ ಅವರ ಉಪನ್ಯಾಸಗಳು ಒಂದೇ, ಎರಡೇ, ಹತ್ತಾರು. ಪಂಪಭಾರತ, ಅಶ್ವತ್ಥಾಮನ್, ಕಠೋಪನಿಷತ್ತು, ಕುಮಾರವ್ಯಾಸಭಾರತ, ಪಂಪ ರಾಮಾಯಣ, ಪಾರಸಿಕರು ಇತ್ಯಾದಿ ಒಮ್ಮೆ

ಬೆಂಗಳೂರಿನಲ್ಲಿ ಅವರು ಮಾಡಿದ 'ಕನ್ನಡ ಛಂದಸ್ಸಿ'ನ ಮೇಲಣ ಭಾಷಣವನ್ನು ಕುರಿತು 'ತಾಯಿನಾಡು' ಪತ್ರಿಕೆ ಸುದೀರ್ಘವಾದ ಲೇಖನವನ್ನು ಪ್ರಕಟಿಸಿತ್ತು.

'ಶ್ರೀ' ಯವರ ಪ್ರವಚನ ರೀತಿಯೇ ಅದ್ಭುತವಾದುದು. ಕಾವ್ಯ ಬೋಧಿಸುವಾಗ ಕವಿಯ ವಿಷಯ, ಕಾವ್ಯದ ಹಿನ್ನಲೆ ವಿವರಿಸಿ ಕೃತಿಯ ವಾಚನ ದಿಂದಲೇ ಶ್ರೋತೃಗಳಿಗೆ ಅರ್ಥವಾಗುವಂತೆ ಮಾಡಿಬಿಡುತ್ತಿದ್ದರು. ಅವರ ಆಳವಾದ ಅಭ್ಯಾಸ, ಪಾಂಡಿತ್ಯಗಳು ನೀರಸವಾದ ವಿಷಯಗಳನ್ನೂ ಸರಸವಾಗಿ ಹೇಳುತ್ತಿದ್ದ ಶಕ್ತಿ ಇವು ಸ್ಪಷ್ಟವಾಗುತ್ತಿದ್ದವು.

An hour with English Poets ಮತ್ತು 'A Gramarians Funeral' ಎಂಬ ಕ್ಲಿಷ್ಟ ಕಾವ್ಯ ಮತ್ತು 'ಕುಜಿಳ್' ಎಂಬ ತಮಿಳು ಕಾವ್ಯ ಕುರಿತು 'ಶ್ರೀ' ಯವರು ಮಾಡಿದ ಉಪನ್ಯಾಸಗಳನ್ನು ಕೇಳಿ ಬೆರಗಾದೆ ಅವರ ಮಾತು ಕೇವಲ ಉಪನ್ಯಾಸಗಳಾಗಿರುತ್ತಿರಲಿಲ್ಲ, ಕಾವ್ಯವಾಗಿರುತ್ತಿತ್ತು.

ಪ್ರಸಿದ್ಧ ತಮಿಳು ವಿದ್ವಾಂಸರು 'ಕುಜಿಳ್' ಕಾವ್ಯದ ಮೇಲೆ ಮಾತನಾಡಿದ ಮೇಲೆ ಆ ಸಭೆಗೆ ಅಧ್ಯಕ್ಷರಾಗಿದ್ದ ಬಿ.ಎಂ.ಶ್ರೀ.ಯವರು ಭಾಷಣದಲ್ಲಿ 'ಶ್ರೀಯುತರು' ಕುಜಿಳ್' ಸಮುದ್ರದಲ್ಲಿ ಮುಳುಗಿ ಕೆಲವು ರತ್ನಗಳನ್ನು ತಂದಿದ್ದಾರೆ. ನಾನು ಆ ಪ್ರಯತ್ನ ಮಾಡುತ್ತೇನೆ' ಎಂದು ಹೇಳಿ ಸುಮಾರು ಎರಡೂವರೆ ಗಂಟೆಗಳ ಕಾಲ ತಮಿಳು ಕಾವ್ಯದ ಪದ್ಯಗಳನ್ನು ಪುಸ್ತಕದ ಸಹಾಯವಿಲ್ಲದೆ ಉದಾಹರಿಸುತ್ತ, ವ್ಯಾಖ್ಯಾನ ಮಾಡುತ್ತಾ ತಮಿಳಿನಲ್ಲಿ ಉಪನ್ಯಾಸ ಮಾಡಿದರು. ಅವರ ಉಪನ್ಯಾಸ ನಮಗೆ ಬೆರಗು ಆಶ್ಚರ್ಯಗಳನ್ನು ತಂದಿತು.

'ಶ್ರೀ' ಯವರು 'An hour with English Poets' ಕುರಿತು ಉಪನ್ಯಾಸ ನೀಡಿದಾಗ ಅಂದಿನ ಸಭಾಧ್ಯಕ್ಷರಾಗಿದ್ದ ಪ್ರೊಫೆಸರ್ ಎ.ಬಿ.ಮ್ಯಾಕೆಂಟ್ಯಾಷರು 'ಹಿಂದಿನ ಜನ್ಮದಲ್ಲಿ 'ಶ್ರೀ' ಆಕ್ಸ್‌ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಅಥವಾ ಗ್ರೀಕ್ ಭಾಷೆಯ ಪ್ರಾಧ್ಯಾಪಕರಾಗಿದ್ದಿರಬೇಕು. ಎಂದು ಮುಕ್ತಕಂಠದಿಂದ ಹೊಗಳಿದರು.

'ಶ್ರೀ' ಹಲವಾರು ಭಾಷೆಗಳನ್ನು ಕಲಿತು ಆ ಭಾಷೆಗಳ ಸಾಹಿತ್ಯ ಕೃತಿಗಳನ್ನು ಅಭ್ಯಾಸ ಮಾಡಿದ್ದರು. ಕನ್ನಡ ಪ್ರಚಾರಕ್ಕಾಗಿ ಹೋದ ಕಡೆಗಳಲ್ಲೆಲ್ಲಾ 'ಕರ್ನಾಟಕ ಸಂಘ'ಗಳನ್ನು ಕಟ್ಟಿದರು. ಜನರ ಪ್ರೀತಿ, ವಿಶ್ವಾಸ ಗಳಿಸಿದರು. ವಿಶ್ವವಿದ್ಯಾನಿಲಯ ದಲ್ಲಿ ದತ್ತಿಗಳನ್ನು ಕಲ್ಪಿಸಿದರು. ತರುಣ ಲೇಖಕರಿಗೆ ಪ್ರೋತ್ಸಾಹ, ಮೆಚ್ಚು ನುಡಿ ಯಾವಾಗಲೂ ಸಿದ್ಧವಾಗಿರುತ್ತಿತ್ತು. ನಾನು ಮಹಾರಾಜ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ 'ತರುಣರ ದಂಡು' ಎಂಬ ಸಂಘವಿತ್ತು. ಕೆಲವು ಕಾಲ ನಾನು

ಅದರ ಕಾರ್ಯದರ್ಶಿಯಾಗಿದ್ದೆ. ೧೯೩೦ರಲ್ಲಿ ವಾರ್ಷಿಕೋತ್ಸವಕ್ಕೆ 'ಶ್ರೀ' ಅಧ್ಯಕ್ಷರಾಗಿದ್ದರು.

ಕುರ್ಚಿಯ ಮೇಲೆ ಕುಳಿತಿದ್ದ 'ಶ್ರೀ' ಎದ್ದು ನಿಂತು 'ಇದು ತರುಣರ ದಂಡು, ಕುರ್ಚಿಯ ಮೇಲೆ ಕುಳಿತುಕೊಳ್ಳಬೇಕಾದವರು ನೀವು. ವಯಸ್ಸಾದ ನಾನು ನಿಂತುಕೊಳ್ಳುತ್ತೇನೆ ಎಂದು ಹೇಳಿ ನಮ್ಮನ್ನು ಕುಳಿತುಕೊಳ್ಳವಂತೆ ಮಾಡಿದರು. ಇದು ನಮಗೆ ಅಚ್ಚರಿಯನ್ನುಂಟು ಮಾಡಿತು. ಪರೀಕ್ಷೆ ಮುಗಿದ ಮೇಲೆ ಅವರು 'ಕನ್ನಡವನ್ನು ನಿಮ್ಮ ಕೈಲಿಟ್ಟಿದ್ದೇನೆ. ಅದನ್ನು ಕಾಪಾಡಿಕೊಂಡು ಬನ್ನಿ' ಎಂದು ಹೇಳಿ ಕೈ ಮುಗಿದರು.

ಆ ಕಾಲದಲ್ಲಿ 'ಶ್ರೀ'ಯವರಿಗೆ ಲಭಿಸಿದಷ್ಟು ಜನಮನ್ನಣೆ ಇತರರಿಗೆ ಯಾರಿಗೂ ಲಭಿಸಿಲ್ಲವೆಂದು ತೋರುತ್ತದೆ. ಸಾವಿರಾರು ವಿದ್ಯಾರ್ಥಿಗಳಿಗೆ ಪ್ರೀತಿ, ವಿಶ್ವಾಸ, ನಿರ್ವಂಚನೆಯಿಂದ ವಿದ್ಯಾದಾನ ಮಾಡಿದರು.

೧೯೬೬ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವದ ಸಮಾರಂಭದಲ್ಲಿ ಅಧ್ಯಕ್ಷರಾಗಿದ್ದ ರಾಷ್ಟ್ರಪತಿ ಡಾ ಎಸ್. ರಾಧಾಕೃಷ್ಣನ್ ತಮ್ಮೊಡನಿದ್ದ ಪ್ರಾಧ್ಯಾಪಕರಾಗಿದ್ದ ಎನ್.ಎಸ್.ಸುಬ್ಬರಾಯರು, ಎಂ.ಹಿರಿಯಣ್ಣನವರು, ಬಿ.ಎಂ.ಶ್ರೀಕಂಠಯ್ಯನವರನ್ನು ಸ್ಮರಿಸಿಕೊಂಡರು. ಶ್ರೀಯವರ ವ್ಯಕ್ತಿತ್ವಕ್ಕೆ ಇದಕ್ಕಿಂತ ಬೇರೆ ಪ್ರಶಂಸೆ ಬೇಕೆ?"

**೧೭. ಹೆಚ್.ಜಿ. ಸೂರ್ಯನಾರಾಯಣರಾವ್ ೧೦-೨-೧೯೨೪, ೨೪-೫-೧೯೮೫.**

"ಬಿ.ಎಂ.ಶ್ರೀ. ಯವರ ಸೇವಾವಧಿಯ ಕೊನೆಯ ವರ್ಷ (೧೯೪೧ - ೧೯೪೨) ನಾನು ಆನರ್ಸ್ ತರಗತಿಯ ಮೊದಲ ವರ್ಷದ ವಿದ್ಯಾರ್ಥಿಯಾಗಿದ್ದೆ. ಅವರ ಕೈಕೆಳಗೆ ಓದುವ ಸೌಭಾಗ್ಯ ಒದಗುವುದೆಂದು ನಾನು ಕನಸು ಮನಸಿನಲ್ಲೂ ಎಣಿಸಿರಲಿಲ್ಲ. ಯಾಕೆಂದರೆ ಅವರ ಕೆಲವು ಭಾಷಣಗಳನ್ನು ಕೇಳಿ ಅವರ ವಾಗ್ವಿಲಾಸದಿಂದ ಮೋಹಿತನಾಗಿದ್ದೆ. ನನ್ನೊಂದಿಗೆ ಎಲ್.ಎಸ್.ಶೇಷಗಿರಿರಾವ್ ಇಂಗ್ಲಿಷ್ ಬಿ.ಎ. (ಆನರ್ಸ್) ಸೇರಿಕೊಂಡರು.

'ಶ್ರೀ' ಯವರು ಮೊದಲನೆಯ ವರ್ಷವೇ ಪೌಲನಿಕ ನಾಟಕವನ್ನು ಬೋಧಿಸಿದರು. ಗ್ರೀಕ್ ರುದ್ರನಾಟಕದ ನಿರೂಪಣೆ ಮಾಡಿದರು. ನನಗೆ ಗ್ರೀಕ್ ನಾಟಕದ ಪಠ್ಯ ಪುಸ್ತಕವನ್ನು ತರಿಸಿಕೊಟ್ಟರು. ನಮಗೆ ಗ್ರೀಕ್ ನಾಟಕ ಕುರಿತು ಪ್ರಬಂಧ ಬರೆಯುವಂತೆ ಹೇಳಿದರು. ನಮ್ಮ ಪ್ರಬಂಧದ ಒಟ್ಟಾರೆ ದೃಷ್ಟಿ, ಶೈಲಿ, ವಾಕ್ಯರಚನೆ, ವಿಷಯ ನಿರೂಪಣೆಯನ್ನು ಕುರಿತು ಅವರು ಕೊಟ್ಟ ವಿಮರ್ಶೆ ಅತ್ಯಂತ ಉಪಯುಕ್ತವಾಗಿತ್ತು. ಅವರು ಒತ್ತು ಕೊಟ್ಟದ್ದು, ನಿಖರತೆ ಮತ್ತು

ಸರಳತೆಗೆ, ಅವರು ಪಾಠ ಮಾಡಿದ ಕಾಳಿದಾಸನ 'ಶಾಕುಂತಲಾ' ನಾಟಕ ನನಗೆ ಹೊಸ ಅನುಭವವಾಗಿತ್ತು.'

ಅವರು ತರಗತಿಯ ಪಾಠವನ್ನು ನಿಗದಿಯಾದ ಅವಧಿಯಲ್ಲೇ ತೆಗೆದುಕೊಳ್ಳುತ್ತಿದ್ದರು. ವರ್ಷದ ಕೊನೆಯಲ್ಲಿ ಷೇಕ್ಸ್‌ಪಿಯರ್ ನಾಟಕಗಳನ್ನು ಕುರಿತು ಆರೇಳು ಘಂಟೆಗಳ ಕಾಲ ಉಪನ್ಯಾಸ ನೀಡುತ್ತಿದ್ದರು. ನಾಟಕ ಲೋಕಕ್ಕೆ ವಿದ್ಯಾರ್ಥಿಗಳನ್ನು ಕೊಂಡೊಯ್ದು ಒಂದು ರಸಯಾತ್ರೆಯನ್ನೆ ಮಾಡಿಸುತ್ತಿದ್ದರು. ನಿವೃತ್ತರಾದ ದಿನ ಅವರು 'ಪ್ರವೃತ್ತಿ – ನಿವೃತ್ತಿ' ಎಂಬ ವಿಷಯವನ್ನು ಕುರಿತು ಕಿಕ್ಕಿರಿದ ವಿದ್ಯಾರ್ಥಿ ಸಮೂಹಕ್ಕೆ ಭಾಷಣ ಮಾಡಿದರು. ಅಂದು ಅವರ ಜೀವನ ದೃಷ್ಟಿಯನ್ನೇ ವಿವರಿಸಿದಂತೆ ನನಗೆ ಅನ್ನಿಸಿತು.

**೧೮. ಎಂ.ಎಸ್. ಲಕ್ಷ್ಮೀನಾರಾಯಣ ರಾವ್: ೧೫-೫-೧೯೩೮, ೧೪-೦೧-೧೯೭೯.**

"ಸೊಗಸಾದ ಸುಂದರ ಮೂರ್ತಿ ಶ್ರೀ' ಕತ್ತಿನ ಪಟ್ಟಿಯ ಎದೆ ಮುಚ್ಚುವ ಅಂಗಿ ತೊಟ್ಟು, ಷರಾಯಿ ಹಾಕಿ, ತಲೆಯಲ್ಲಿ ಜರತಾರಿ ರುಮಾಲು ಧರಿಸಿ, ಗಾಂಭೀರ್ಯದಿಂದ ಸುಂದರವಾದ ನಿಲುವಿನಲ್ಲಿ ನಿಂತಾಗ ಅವರು ಅಮೃತಶಿಲೆಯ ಪ್ರತಿಮೆಯಂತೆ ಕಾಣಿಸುತ್ತಿದ್ದರು. ಅವರನ್ನು ನೋಡುವುದೇ ವಿದ್ಯಾರ್ಥಿಗಳಾಗಿದ್ದ ನಮಗೆ ಆನಂದವಾಗುತ್ತಿತ್ತು. ಆಗಿನ ನಿಯಮದಂತೆ ಕರಿಗೌನನ್ನು ಧರಿಸಿ ತರಗತಿಗೆ ಬಂದಾಗ ಮಂದಮಾರುತ ಸುಳಿದಂತೆ ಭಾಸವಾಗುತ್ತಿತ್ತು. ಆ ಭವ್ಯತೆ, ಹಸನ್ಮುಖ, ಆ ಒಲವು, ಆ ಗೆಲವು ಆ ದಿಟ್ಟ ನಿಲುವು! ನಾಟಕ, ಪ್ರವಚನ ಪ್ರಾರಂಭಿಸಿದರೆ ಸಾಕು ತರಗತಿ ಮೈಮರೆಯುತ್ತಿತ್ತು. ಅವರು ಉಚ್ಚರಿಸುತ್ತಿದ್ದ ಕೆಲವು ಸಾಲುಗಳು ಇಂದಿಗೂ ನನ್ನ ತಲೆಯಲ್ಲಿ ಪ್ರತಿಧ್ವನಿಸುತ್ತಿದೆ.

'ಶ್ರೀ'ಯರ ಬೋಧನೆ, ಭಾಷಣಗಳನ್ನು ಕೇಳಿ ವಿಸ್ಮಿತನಾಗಿದ್ದೆ. ಮೂರು ಗಂಟೆಗಳ ಕಾಲ ನಿರರ್ಗಳವಾಗಿ ಉಪನ್ಯಾಸ ನೀಡುತ್ತಿದ್ದರು. ಒಂದು ದಿನವೂ ವಿದ್ಯಾರ್ಥಿಗಳಿಗೆ ನೋಟ್ಸ್ ಬರೆಸಿದವರಲ್ಲ. ಕಪ್ಪು ಹಲಗೆಯನ್ನು ಬೋಧನೆಯ ಸಹಾಯಕ್ಕೆ ಪಡೆದು ಅದರ ಮೇಲೆ ಗೆರೆ ಎಳೆಯುವುದು ಸೊನ್ನೆ ಸುತ್ತುವುದನ್ನು ಮಾಡುತ್ತಿದ್ದರು. ಆಗಾಗ ಕತ್ತನ್ನು ಒಂದು ಕಡೆಗೆ ಬಾಗಿಸಿ ಕಣ್ಮುಚ್ಚುತ್ತಿದ್ದರು.

'ಶ್ರೀ'ಯವರ ನಡೆನುಡಿ ವಿದ್ಯಾರ್ಥಿಗಳಿಗೆ ಮಾದರಿಯಾಗಿತ್ತು. ಸಮರ್ಥ ಶಿಷ್ಯರನ್ನು ಹೊಗಳುತ್ತಿದ್ದರು. 'ಈ ಪ್ರಬಂಧವನ್ನು ನಾನು ನಿನಗಿಂತ ಚೆನ್ನಾಗಿ ಬರೆಯಲಾರೆ' ಎಂದು ಪ್ರಶಂಶಿಸುತ್ತಿದ್ದರು. ಆಕರ್ಷಕ ಭಾಷಣಕಾರರಾಗಿದ್ದ

ಅವರನ್ನು ಅನೇಕರು 'ತುಂಬಿದ ಕೊಡ' ಎಂದು ಹೊಗಳುತ್ತಿದ್ದರು. ಅವರ ಧೀರವಾದ ನಿಲುವು, ವಾಚನ ಶೈಲಿ, ಧ್ವನಿಯ ಏರಿಳಿತ ನಿಲ್ಲಿಸುವ ತಾಣ. ಇವುಗಳನ್ನು ನಾನು ಮರೆಯಲಾರೆ."

**೧೯. ಕೆ. ವೆಂಕಟರಾಮಪ್ಪ: ೨-೮-೧೯೦೬ – ೨-೯-೧೯೯೧**

'ಬಿ.ಎಂ.ಶ್ರೀ ಬಹಳ ವರ್ಷ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು, ಸಹಸ್ರಾರು ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಭಾಷಾ ಸಾಹಿತ್ಯಗಳನ್ನು ಪಾಠ ಹೇಳಿ ಶಿಷ್ಯ ಕೋಟಿಯ ಅಮಿತವಾದ ಆದರ, ಗೌರವಗಳಿಗೆ ಪಾತ್ರರಾಗಿದ್ದ ಮಹಾ ವಿದ್ವಾಂಸರು. ವಿದ್ಯಾರ್ಥಿಗಳಿಗೆ ಆರಾಧ್ಯಮೂರ್ತಿಯಾಗಿದ್ದರು. ಅವರ ಪಾಠ ಅಮೋಘ ರಸದೂಟವೇ ಆಗಿರುತ್ತಿತ್ತು. ಅಂದಿನ ಬಿ.ಎ. ತರಗತಿಯಲ್ಲಿ ಇನ್ನೂರು, ಮುನ್ನೂರು ವಿದ್ಯಾರ್ಥಿಗಳಿದ್ದರು.

'ಶ್ರೀ' ಹುಟ್ಟು ಉಪಾಧ್ಯಾಯರು, ವಿದ್ಯಾರ್ಥಿಗಳು ಪ್ರಶ್ನೆ ಕೇಳದಂತೆ, ಹತ್ತಿ ಹಿಂಜಿದ ಹಾಗೆ ಬಿಡಿಸಿ ಬಿಡಿಸಿ ಹೇಳುತ್ತಿದ್ದರು. ಹಳೆಗನ್ನಡದ ಕೃತಿಗಳನ್ನೆಲ್ಲಾ ವ್ಯಾಸಂಗ ಮಾಡಿದ್ದರು. ಹೊಸ ಛಂದಸ್ಸಿನ ಕಾವ್ಯಗಳು, ಹೊಸ ಜೀವನವನ್ನು ಚಿತ್ರಿಸುವ ಕಾವ್ಯಗಳು ಬರಬೇಕೆಂದು ಬಯಸಿದರು. ಕನ್ನಡದ ಹಿರಿಮೆ ಕುರಿತು ಉಪನ್ಯಾಸ ಮಾಡಿದರು. 'ಸಿರಿಗನ್ನಡಂ ಗೆಲ್ಗೆ', 'ಕನ್ನಡ ತಾಯ್ ಬಾಳ್ಗೆ' ಎಂಬುದು ಅವರ ನಿತ್ಯ ಪ್ರಾರ್ಥನೆಯಾಗಿತ್ತು.

'ಶ್ರೀ' ಕನ್ನಡದ ಮಹಾ ದೀಕ್ಷಿತರು, ಪರಮಾಚಾರ್ಯರು, ವೀರಾಭಿಮಾನಿಗಳು 'ಕನ್ನಡ ನನಗೆ ಮುಂದು, ಉಳಿದುದು ಏನಿದ್ದರೂ ಅದರ ಹಿಂದು ಎಂದು ಘೋಷಿಸಿದ್ದರು. 'ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನೊಳು ಕೈ ಹಿಡಿದು ನಡೆಸೆಮ್ಮನು' ಎಂದು ಪ್ರಾರ್ಥಿಸಿದರು. 'ಕನ್ನಡಿಗರೇ ಏಳಿ, ಎಚ್ಚರಗೊಳ್ಳಿ, ಆರಂಭ ಮಾಡಿ. ನಾವು ಕನ್ನಡಿಗರು. ಇಂದು ಸತ್ತವರನ್ನು ಎಬ್ಬಿಸುವುದೇ ಇಲ್ಲ, ಬದುಕಿರುವವರನ್ನು ಎಚ್ಚರಗೊಳಿಸುವುದಕ್ಕೆ ಹೊರಟಿರುವೆವು ಎಂದು ಸ್ವಲ್ಪ ಖಾರವಾಗಿಯೇ ನುಡಿದರು.

ಬಿ.ಎಂ.ಶ್ರೀ. ಕನ್ನಡದ ಆದ್ಯ ಚಳುವಳಿಗಾರರು.

**೨೦. ಎಂ. ಯಾಮುನಾಚಾರ್ಯ : ೩-೯-೧೮೯೯, ೪-೧-೧೯೭೦**

**'ವ್ಯಾಸಂಗ ಗೋಷ್ಠಿಯ ನೆನಪು'** : 'ನಾನು ಮೈಸೂರು ಮಹಾರಾಜ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ 'ಶ್ರೀ' ಯವರು ನನ್ನ ಗುರುಗಳಾಗಿದ್ದರು. ಮೂರು ವರ್ಷ ಕಾಲ ಅವರಲ್ಲಿ ಇಂಗ್ಲಿಷ್ ಸಾಹಿತ್ಯದ ವ್ಯಾಸಂಗ ಮಾಡಿದೆ.

ಆಗಿನಿಂದಲೇ ಅವರಲ್ಲಿ ಪೂಜ್ಯಭಾವ ನನ್ನ ಮನಸ್ಸಿನಲ್ಲಿ ನೆಲಸಿತು. ಬೆಂಗಳೂರಿನಲ್ಲಿ ಅಧ್ಯಾಪಕನಾಗಿದ್ದಾಗ ಅವರಲ್ಲಿ ಮತ್ತೆ ಇಂಗ್ಲಿಷ್ ಸಾಹಿತ್ಯದ ವ್ಯಾಸಂಗ ಮುಂದುವರಿಸುವ ಸುಯೋಗ ನನಗೆ ದೊರೆಯಿತು. ಸೆಂಟ್ರಲ್ ಕಾಲೇಜಿನಲ್ಲಿ 'ಶ್ರೀ'ಯವರ ನೇತೃತ್ವದಲ್ಲಿ ಅಧ್ಯಾಪಕ ವರ್ಗದವರೂ ವಿಶೇಷವಾಗಿ ಇಂಗ್ಲಿಷ್ ಸಾಹಿತ್ಯ ವ್ಯಾಸಂಗ ಮಾಡುವ ವಿದ್ಯಾರ್ಥಿಗಳೂ ಕಲೆತು ಉತ್ತಮ ಸಾಹಿತ್ಯ ಗ್ರಂಥಗಳನ್ನು ವಿಶಾಲದೃಷ್ಟಿಯಿಂದ ಓದಿ ವಿಚಾರಮಾಡಿ ಆನಂದಪಡುವ ವ್ಯಾಸಂಗ ಗೋಷ್ಠಿ (Seminar) ಏರ್ಪಾಡಾಯಿತು. ಹದಿನೈದು ದಿನಗಳಿಗೊಮ್ಮೆ ಆ ವ್ಯಾಸಂಗ ಗೋಷ್ಠಿ ಸೇರುತ್ತಿತ್ತು. ಅಲ್ಲಿ ವ್ಯಾಸಂಗ ಮಾಡುವ ಗ್ರಂಥಗಳು ಕೇವಲ ಇಂಗ್ಲಿಷ್ ಸಾಹಿತ್ಯವಲ್ಲದೆ ಪೌರಸ್ತ್ಯ ಸಾಹಿತ್ಯಕ್ಕೂ ಸಂಬಂಧಿಸುತ್ತಿದ್ದವು. ಕೆಲವು ವೇಳೆ ತತ್ವ ಮತ್ತು ಮತ ಧರ್ಮಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ವ್ಯಾಸಂಗಮಾಡಿ ಅಲ್ಲಿ ನಡೆಯುವ ಚರ್ಚೆಯಲ್ಲಿ ಭಾಗವಹಿಸುತ್ತಿದ್ದೆವು.

ಅಲ್ಲಿ ವ್ಯಾಸಂಗ ಮಾಡುತ್ತಿದ್ದ ಗ್ರಂಥಗಳು ಗದ್ಯ,ಪದ್ಯ,ನಾಟಕ,ಸಣ್ಣಕತೆ, ನೀಳ್ಗತೆಗಳನ್ನು ಒಳಗೊಂಡಿದ್ದವು. ಒಂದು ಸಲ ಮ್ಯಾಥ್ಯು ಆರ್ನಾಲ್ಡರ 'ಸಂಸ್ಕೃತಿ ಮತ್ತು ನಿರಂಕುಶ ಜೀವನ' (Cuture and anarchy) ಎಂಬ ಗ್ರಂಥವನ್ನು ವಿಮರ್ಶೆಗೆ ಜೀವನ ಇಟ್ಟುಕೊಂಡಿದ್ದೆವು. 'ಶ್ರೀ' ಯವರಿಗೆ ಆತನಲ್ಲಿ ವಿಶೇಷ ಅಭಿಮಾನ, ಆತನ ಅಭಿಪ್ರಾಯಗಳಿಗೂ 'ಶ್ರೀ' ಯವರ ಅಭಿಪ್ರಾಯಗಳಿಗೂ ಸಾಮರಸ್ಯವಿತ್ತು.

'ಶ್ರೀ' ಯವರು ಮತಧರ್ಮಗಳ ವ್ಯಾಸಂಗವನ್ನು ಆಳವಾಗಿ ಅಭ್ಯಾಸಮಾಡಿದ್ದರು. ಅದನ್ನು ಗಮನಿಸಿದ ನಮಗೂ ಅವರಂತೆಯೇ ವ್ಯಾಸಂಗ ಮಾಡಬೇಕೆಂಬ ಪ್ರೇರಣೆಯಾಯಿತು. ಒಂದು ಸಲ ಅವರು ಪ್ಲೇಟೊವಿನ 'ಆದರ್ಶ ರಾಜ್ಯ' ದ ಕಡೆ ನಮ್ಮ ಗಮನ ಸೆಳೆದರು. ಆದರ್ಶ ಮನುಷ್ಯನಿಂದ ಆದರ್ಶ ಸಮಾಜವಾಗಬಲ್ಲದು. ಆದರ್ಶ ಮನುಷ್ಯನ ನಿರ್ಮಾಣ ಆದರ್ಶ ಶಿಕ್ಷಣದಿಂದ ಸಾಧ್ಯವಾಗಬಲ್ಲದು. ಸ್ತ್ರೀ ಪುರುಷರಿಬ್ಬರಿಗೂ ಆದರ್ಶ ಶಿಕ್ಷಣ ಅಗತ್ಯ. ಗಂಡಸರಂತೆ ಹೆಂಗಸರಿಗೂ ಶಾರೀರಿಕ ವ್ಯಾಯಾಮ, ಗಣಿತ, ಸಂಗೀತ, ಶಿಕ್ಷಣವನ್ನು ಕೊಡುವುದು ಅವಶ್ಯಕ. ಶರೀರಕ್ಕೆ ವ್ಯಾಯಾಮವು ಹೇಗೆ ಅವಶ್ಯಕವೋ ಹಾಗೆ ಮನಸ್ಸಿಗೆ ಕಾವ್ಯ, ಕಲೆಗಳು ಅವಶ್ಯಕ. ಇವೇ ಮೊದಲಾದ ವಿಷಯಗಳು ರೂಪಿಸಲ್ಪಟ್ಟವು.

ಸಂಸ್ಕೃತ ಸಾಹಿತ್ಯವನ್ನು ನಮ್ಮ ಸೆಮಿನಾರಿನಲ್ಲಿ ಆಗಾಗ ವಿಮರ್ಶಿಸುತ್ತಿದ್ದೆವು. ಒಂದು ದಿನ ಕಠೋಪನಿಷತ್ತಿನ ವ್ಯಾಸಂಗ ನಡೆಯಿತು. ನಚಿಕೇತನಿಗೆ ಹುಟ್ಟಿದ್ದ

ಅರಿವಿನ ಹಸಿವು ಮೇರೆ ಇಲ್ಲದ್ದು; ಎರಡು ದಿನದ ಬಾಳಿನ ಬೆಡಗಿಗೆ ಮನಸೋಲದೆ ತತ್ವದ ಕೊನೆಮುಟ್ಟಬೇಕೆಂಬ ಛಲ ಎಷ್ಟರಮಟ್ಟಿನದೆಂದು ಬೆರಗಾಗುವಂತೆ ಬಣ್ಣಿಸಿದ 'ಶ್ರೀ'ಯವರ ಕಾವಿನ ನುಡಿ ನಾನೆಂದೂ ಮರೆಯುವಂತಿಲ್ಲ. ಇದೇ ರೀತಿ ಬೈಬಲ್ಲಿನ 'ಜೋಬಿನ ಉಪಾಖ್ಯಾನ'ವನ್ನು ((Book of Job) ವಿಮರ್ಶೆ ಮಾಡುವಾಗಲೂ ತಮ್ಮ ನಿಜವಾದ ಧರ್ಮ ಶ್ರದ್ಧೆಯನ್ನು ತೋರ್ಪಡಿಸಿದರು. ಶೂದ್ರಕನ 'ಮುದ್ರಾರಾಕ್ಷಸ' ಭಾಸನ 'ಪ್ರತಿಮಾನಾಟಕ' ಗಳನ್ನೂ ಕುರಿತು ಸೂಕ್ಷ್ಮವಾದ ವಿಮರ್ಶೆಯನ್ನು ಮಾಡಿದರು. ಈ ಸಂದರ್ಭದಲ್ಲಿ ರಾಜಕೀಯ ಘಟನೆಯೊಂದನ್ನು ನಾಟಕರೂಪಕ್ಕೆ ಹೇಗೆ ತಿರುಗಿಸಬಹುದು ಎಂಬುದನ್ನೂ, ಸಂಸ್ಕೃತ ನಾಟಕದ ಮೇಲೆ ಗ್ರೀಕ್ ನಾಟಕದ ಪ್ರಭಾವವಿರಬಹುದೆಂಬುದನ್ನೂ ಸಾಧಾರವಾಗಿ ಅವರು ನಿರೂಪಿಸಿದರು.

ಧರ್ಮ ಮತ್ತು ಮತ ವಿಚಾರಗಳಲ್ಲಿ ಸಂಕುಚಿತ ಭಾವಲೇಶಮಾತ್ರವೂ 'ಶ್ರೀ'ಯವರಲ್ಲಿ ಕಾಣುತ್ತಿರಲಿಲ್ಲ. ಉಪನಿಷತ್ತು ಗೌತಮ ಬುದ್ಧನ ಉಪದೇಶ ಏಸುಕ್ರಿಸ್ತನ ಜೀವನ ಮತ್ತು ತ್ಯಾಗ, ಭಗವದ್ಗೀತೆಯ ತತ್ವೋಪದೇಶ ಎಲ್ಲವನ್ನೂ ಸೆಮಿನಾರಿನಲ್ಲಿ ವ್ಯಾಸಂಗ ಮಾಡಿದ ನೆನಪು ನನ್ನಲ್ಲಿ ಉಳಿದಿದೆ. ಒಂದು ರೀತಿಯ ಶ್ರದ್ಧೆಯಿಂದಲೂ ಪೂಜ್ಯಭಾವದಿಂದಲೂ ಮತಾಂತರ ಗ್ರಂಥಗಳನ್ನು ನಿಷ್ಪಕ್ಷಪಾತವಾಗಿ ವ್ಯಾಸಂಗಮಾಡುವ ಧರ್ಮದ ಹೊಸದೃಷ್ಟಿ ತಮ್ಮಲ್ಲಿರುವುದನ್ನು ಇತರರಲ್ಲೂ ಉಂಟಾಗುವಂತೆ ಮಾಡಿದರು. ಇದೇ ಭಾವವು ಕನ್ನಡ ಸಾಹಿತ್ಯದ ವಿಷಯದಲ್ಲಿ ಇವರಿಗೆ ಇರುವುದು ಎಲ್ಲರಿಗೂ ತಿಳಿದ ಅಂಶವೇ ಆಗಿರುತ್ತದೆ. ಜೈನ ಸಾಹಿತ್ಯ, ವೀರಶೈವ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯ ಕನ್ನಡ ನಾಡಿನವರಿಗೆಲ್ಲಾ ಸೇರಿದ ಭಾಗ್ಯವೆಂದೂ; ಈ ಮೂರು ಸಾಹಿತ್ಯಗಳನ್ನೂ ಮತದ ದೃಷ್ಟಿಯನ್ನು ಒತ್ತಟ್ಟಿಗಿಟ್ಟು, ಸಾಹಿತ್ಯಕ್ಕಾಗಿಯೇ ಅವುಗಳ ಅನುಭವ ಪಡೆಯುವ ಅಭ್ಯಾಸ ನಮ್ಮದಾಗಬೇಕೆಂದೂ ಅವರ ಉಪನ್ಯಾಸಗಳಲ್ಲಿ 'ಶ್ರೀ'ಯವರು ಸಾರುತ್ತಿರುತ್ತಾರೆ. ಇಂತಹ ಉದಾರ ಭಾವನೆ 'ಶ್ರೀ' ಯವರದು.

'ಶ್ರೀ'ಯವರು ಒಮ್ಮೆ ಸೆಮಿನಾರಿನಲ್ಲಿ ಪಂಡಿತಜವಾಹರಲಾಲ್ ನೆಹರುರವರ ಮತ್ತೊಮ್ಮೆ ಹಿಟ್ಲರಿನ 'ನನ್ನ ಹೋರಾಟ' (Mein Kampi) ಎಂಬುದನ್ನು ಚರ್ಚೆಗಾಗಿ ಇಟ್ಟುಕೊಂಡಿದ್ದೆವು. ವಿಶ್ವಶಾಂತಿಗೆ, ಪ್ರಜಾಪ್ರಭುತ್ವ ತತ್ವಕ್ಕೆ ಹಿಟ್ಲರನ ನಾಜಿಸಮ್ (ಸರ್ವಾಧಿಕಾರ ತತ್ವ) ಕುಠಾರಪ್ರಾಯವಾಗದಿರದೆಂದು ಆಗಲೇ ಮನಗಂಡವು. ಈ ನನ್ನ ಕೆಲವು ನೆನಪುಗಳು ಸೆಮಿನಾರಿನಿಂದ ಶ್ರೀಯವರ ವಿದ್ಯಾರ್ಥಿವರ್ಗಕ್ಕೂ, ಸಹೋದ್ಯೋಗಿಗಳಿಗೂ ತುಂಬ ಪ್ರಯೋಜನವಾಗಿದೆ ಎಂದು ನನ್ನ ಅನುಭವದಿಂದ ಹೇಳಬಲ್ಲೆ. ಅವರ ನಂದಾ ದೀವಿಗೆಯಿಂದ

ನನ್ನ ಸೋದರನ್ನು ಹೊತ್ತಿಸಿಕೊಂಡಿದ್ದೇನೆ. ಅದರಿಂದ ನನಗೆ ಕೊಂಚ ಬೆಳಕು ಉಂಟಾಗಿ ಮುಂದಿನ ದಾರಿಯನ್ನು ಕಾಣುತ್ತಿದ್ದೇನೆ.

**೨೧. ಪ್ರೊ. ಎಲ್.ಎಸ್.ಶೇಷಗಿರಿರಾವ್ : ೧೬-೨-೧೯೨೫**

**'ಗುರುಗಳನ್ನು ನಾನು ಕಂಡಂತೆ'** : ಆಚಾರ್ಯ 'ಶ್ರೀ' ಯವರು ಕನ್ನಡ ನಾಡಿಗೇ ಗುರುಗಳು ಅವರು ನನ್ನ ಗುರುಗಳು ಅವರ ತರಗತಿಯಲ್ಲಿ ಕುಳಿತು ಪಾಠ ಹೇಳುವ ಸುಯೋಗ ನನಗೆ ಲಭಿಸಿತ್ತು.

ನಾನು ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಪಡೆದು ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿದ್ದೆ. ವಿಜ್ಞಾನ ವಿಷಯದಲ್ಲಿಯೂ ಹೆಚ್ಚಿನ ಅಂಕಗಳನ್ನು ಪಡೆದಿದ್ದುದರಿಂದ ಬಿ.ಎ. ಕೋರ್ಸಿಗೆ ಅರ್ಜಿ ಸಲ್ಲಿಸಿದ್ದೆ. ಇಂಗ್ಲಿಷ್‌ನಲ್ಲಿ ಫಸ್ಟ್ ರ್‍ಯಾಂಕ್ ಕೂಡ ಗಳಿಸಿದ್ದೆ. ನನ್ನ ಆತ್ಮೀಯ ಗೆಳೆಯ ಎಚ್.ವೈ.ಶಾರದಾಪ್ರಸಾದ್ ಸಲಹೆಯಂತೆ ಇಂಗ್ಲಿಷ್ ಆನರ್ಸ್‌ಗೆ ಅರ್ಜಿ ಹಾಕಿದೆ (ಇಂಗ್ಲಿಷ್‌ನಲ್ಲಿ ಪ್ರಥಮಸ್ಥಾನ ದೊರಕಿದ್ದುದರಿಂದ ಸಬ್ಜೆಕ್ಟ್ ಸ್ಕಾಲರ್‌ಷಿಪ್ ಸಿಗುತ್ತದೆಂಬ ಆಸೆ ಬೇರೆ ಇತ್ತು. ಅದೇ ವೇಳೆಗೆ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಆನರ್ಸ್ ಆರಂಭಿಸುವ ತೀರ್ಮಾನವಾಗಿತ್ತು. ಇಂಗ್ಲಿಷ್‌ನಲ್ಲಿ ಐವತ್ತು ಅಂಕಗಳಿಗಿಂತ ಹೆಚ್ಚು ಅಂಕಗಳಿಸಿರುವವರಿಗೆಲ್ಲ ಪತ್ರ ಹೋಯಿತು. ನಾನು ಸಂದರ್ಶನಕ್ಕೆ ಹೋಗಲು ತೀರ್ಮಾನಿಸಿದೆ. ಸಂದರ್ಶಿಸುವವರಲ್ಲಿ ಆಚಾರ್ಯ ಶ್ರೀಯವರು ಇರುತ್ತಾರೆಂದು ತಿಳಿದು ನನ್ನ ವಿಶ್ವಾಸ ಕುಂದಿತು. ನಾನು ಇಂಟರ್ ಮೀಡಿಯಟ್ ನಲ್ಲಿದ್ದಾಗ ಬಿ.ಎಂ.ಶ್ರೀ.ಯವರನ್ನು ಕಂಡಿದ್ದೆ. ಅವರದು ಆಕರ್ಷಕ ಮುಖ, ಗಂಭೀರ ನಿಲುವು, ಕ್ಲೋಸ್ ಕಾಲರ್ ಕೋಟು ಮತ್ತು ಜರಿಪೇಟ – ಎಲ್ಲವೂ ಕೊಂಚ ಭಯ ಹಾಗೂ ಗೌರವವನ್ನು ಹುಟ್ಟಿಸುವಂತ್ತಿತ್ತು. ಇಂಟರ್ ಓದುತ್ತಿದ್ದಾಗ ಶ್ರೀಯವರ ಭಾಷಣವನ್ನು ಕೇಳಿದ್ದೆ. ಕಾಲೇಜ್ ಕ್ಯಾಂಪಸ್‌ನಲ್ಲಿ ಶ್ರೀಯವರನ್ನು ಯಾರೇ ಕಂಡರೂ ನಿಂತು ದೂರದಿಂದಲೇ ನಮಸ್ಕರಿಸುತ್ತಿದ್ದರು. ಇಂಥ ಗಂಭೀರ ಸ್ವಭಾವದ ವ್ಯಕ್ತಿಯನ್ನು ಸಂದರ್ಶನದಲ್ಲಿ ಭೇಟಿಯಾಗುವ ವಿಷಯವೇ ವಿದ್ಯಾರ್ಥಿಯಾಗಿದ್ದ ನನಗೆ ನಡುಕ ಉಂಟಾಗುವಂತೆ ಆಗುತ್ತಿತ್ತು. ಸಂದರ್ಶನದ ದಿನ ಹತ್ತಿರವಾದಂತೆ ಹದಿನಾರು ವರ್ಷ ವಯಸ್ಸಿನ ನನ್ನ ಆತ್ಮವಿಶ್ವಾಸ ತಗ್ಗಿತು.

ಸಂದರ್ಶನ ಆರಂಭವಾಯಿತು. ಶ್ರೀಯವರು ನನ್ನ ಅಂಕಪಟ್ಟಿಯನ್ನು ನೋಡುತ್ತಾ ಹೇಳಿದರು. (ಸಂದರ್ಶನ ನಡೆದದ್ದು ಇಂಗ್ಲಿಷಿನಲ್ಲಿ) "You get the first place, so there is no problem about your admission' ಅನಂತರ ಇನ್ನೂ ಒಂದು ಪ್ರಶ್ನೆಯನ್ನು ಕೇಳಿದರು.

'What do you propose to do after English honors? ತೀರಾ ಅನಿರೀಕ್ಷಿತವಾದ ಪ್ರಶ್ನೆ! ನಾನು ಉತ್ತರ ಹೇಳಿದೆ 'I suppose I will take up some job' ಶ್ರೀಯವರು ತಕ್ಷಣವೇ 'No, that is not what I mean what are you going to do for your language? ಎಂದು ಪ್ರಶ್ನಿಸಿದರು. ಮುಂದುವರಿದು ಶ್ರೀಯವರು ಹೇಳಿದರು.

"ನಿಮಗೆ ಕನ್ನಡದಲ್ಲೂ ಹೆಚ್ಚು ಅಂಕಗಳು ಬಂದಿವೆ. 'So you are good at both English and Kannada' ಕನ್ನಡವು ಬೆಳೆಯಬೇಕು. ನಾವು ಈಗ ಎಂತಹ ಸ್ಥಿತಿಯಲ್ಲಿದ್ದೇವೆ ಎಂದರೆ ಇತರ ಸಾಹಿತ್ಯದಿಂದ ಏನನ್ನೂ ತಂದರೂ, ಅದಕ್ಕೆ ಅಗಾಧವಾದ ಬೆಲೆಯಿದೆ. ಕನ್ನಡದಲ್ಲಿ 'ಸಾನೆಟ್' ಅಥವಾ ಅಷ್ಟ ಷಟ್ಪದಿಯ ಮೇಲೆ ನೀವು ಒಂದು ಲೇಖನ ಬರೆದರೆ ಅದರಿಂದ ಎಷ್ಟೋ ಸಹಾಯವಾಗುತ್ತದೆ. ಇಂಗ್ಲಿಷ್‌ನಲ್ಲಿ ನೀವು 'ಸಾನೆಟ್' ಮೇಲೆ ಬರೆದರೆ ಲಂಡನ್, ವಾಷಿಂಗ್‌ಟನ್ ಮೊದಲಾದ ಸ್ಥಳಗಳಲ್ಲಿರುವವರು ಅದನ್ನು ಓದುವುದಿಲ್ಲ. ನೀವು ಕನ್ನಡದಲ್ಲಿ ಏನನ್ನು ಬರೆದರೂ ಕನ್ನಡಕ್ಕೆ ಹೆಚ್ಚಿನ ಉಪಕಾರವಾಗುತ್ತದೆ. ಕನ್ನಡಕ್ಕೆ ಆಗಬೇಕಾದ ಕೆಲಸಗಳು ನೂರಿವೆ. ಕನ್ನಡವನ್ನು ಉಳಿಸುವ ಕೆಲಸವನ್ನು ನಿಮ್ಮಂತಹ ತರುಣರ ಕೈಯಲ್ಲಿಡುತ್ತಿದ್ದೇವೆ. 'It is your mother tongue so your mother' ಅವರ ಧ್ವನಿಯಲ್ಲಿ ಎಷ್ಟು ಕಳಕಳಿ ಇತ್ತು ಎನ್ನುವುದು ಸ್ಪಷ್ಟವಾಗಿತ್ತು ಅವರ ಮಾತುಗಳು ನನ್ನ ಹೃದಯವನ್ನು ಹೊಕ್ಕವು.

ಆನರ್ಸ್ ಪರೀಕ್ಷೆಯ ಫಲಿತಾಂಶಗಳು ಬಂದಾಗ ನನಗೆ First Class, First rank ಬಂದಿತ್ತು. ಬಿ.ಎಂ.ಶ್ರೀ.ಯವರು ಆಗ ಧಾರವಾಡದ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಅವರಿಗೆ ನನ್ನ ವಿಳಾಸ ತಿಳಿದಿರಲಿಲ್ಲ. ಬೆಂಗಳೂರಿನಲ್ಲಿದ್ದ ಪ್ರೊ. ಎಸ್.ವಿ.ರಂಗಣ್ಣನವರಿಗೆ Ask Sheshagiri Rao if he is willing to come to Dharwad ಎಂದು ಕಾಗದ ಬರೆದರು. ನನಗೆ ಅವರ ಕಾಲೇಜಿನಲ್ಲಿ ಉಪನ್ಯಾಸಕರ ಸ್ಥಾನವನ್ನು ಕಾಯ್ದಿರಿಸಿರುವುದಾಗಿ ತಿಳಿಸಿದ್ದರು. ಆದರೆ ಒಬ್ಬನೇ ಮಗನನ್ನು ದೂರದ ಧಾರವಾಡಕ್ಕೆ ಕಳುಹಿಸಲು ನನ್ನ ತಂದೆ ತಾಯಿಗಳು ಒಪ್ಪಲಿಲ್ಲ. ಬಿ.ಎಂ.ಶ್ರೀ. ಯವರು ತೀರಿಕೊಳ್ಳುವವರೆಗೆ ನನ್ನನ್ನು ಬಲು ಪ್ರೀತಿಯಿಂದ ನೋಡಿಕೊಂಡರು.

ಬಿ.ಎಂ.ಶ್ರೀ.ಯವರು ನಿವೃತ್ತರಾದ ವರ್ಷದಲ್ಲಿ ನಾನು ಅವರ ವಿದ್ಯಾರ್ಥಿಯಾಗಿದ್ದೆ. ಅವರ ಪಾಠಗಳನ್ನು ಕೇಳುವ ಭಾಗ್ಯ ನನಗೆ ಲಭ್ಯವಾಯಿತು.

ಅವರು ನಮಗೆ ಗ್ರೀಕ್ ನಾಟಕ ಮತ್ತು ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ಗಳನ್ನು ಬೋಧಿಸಿದರು.

ನನಗೆ ಇಂದಿಗೂ ಬಹಳ ಇಷ್ಟವಾದದ್ದು ತೌಲನಿಕ ವಿಮರ್ಶೆ. ಅದರ ಸವಿ ಮತ್ತು ಪ್ರಯೋಜನ ಇವುಗಳು ಬಿ.ಎಂ.ಶ್ರೀ ಅವರು ಪಾಠ ಮಾಡುವಾಗ ಸ್ಪಷ್ಟವಾಗುತ್ತಿದ್ದವು. ಯಾವ ವಿಷಯವನ್ನು ತೆಗೆದುಕೊಂಡರೂ ಅದನ್ನು ತೌಲನಿಕವಾಗಿ ನೋಡುವುದು ನನಗೆ ರಕ್ತಗತವಾಗಿದೆ. ನನ್ನ ಸಾಹಿತ್ಯ ವಿಮರ್ಶೆಯ ಒಂದು ಮುಖ್ಯ ಲಕ್ಷಣ ಅದರ ತೌಲನಿಕ ಅಂಶ. ಶ್ರೀಯವರು ಮೊದಲು Tragedy ಎಂದರೇನು ಎಂಬ ಪ್ರಶ್ನೆಯನ್ನು ಎತ್ತಿಕೊಂಡು ವಿವರಿಸಿದರು.

Is every work of literature that is sad tragic? ಈ ಪ್ರಶ್ನೆಯನ್ನು ಚರ್ಚಿಸಿದ ನಂತರ ಪಾಶ್ಚಾತ್ಯ ಜಗತ್ತಿನ ಮೊಟ್ಟ ಮೊದಲನೆಯ tragic dramatist Aeschglus ನ'Age memnon ಎಂಬ ನಾಟಕವನ್ನು ದೀರ್ಘವಾಗಿ ವಿಮರ್ಶೆ ಮಾಡಿದರು. Sophocles Euripides ಇವರ ಒಂದೊಂದು ಕೃತಿಗಳನ್ನು ವಿಮರ್ಶಿಸಿ tragic ಎಂದರೆ ಏನು ಎನ್ನುವ ಪ್ರಶ್ನೆಗೆ ಉತ್ತರವನ್ನು ಸೂಚಿಸಿದರು. ಅವರು ಹೇಳಿದ ಒಂದು ಮಾತು ನನ್ನ ಮನಸ್ಸಿನಲ್ಲಿ ನಿಂತುಬಿಟ್ಟಿದೆ. Evil destroying goodness is tragic, but even more tragic is goodness destroying goodness. ಇದನ್ನು ದುಷ್ಯಂತನಿಂದ ಶಕುಂತಲೆಗೆ ಒದಗುವ ಆಘಾತವನ್ನು ಉದಾಹರಣೆಯಾಗಿ ಹೇಳಿದರು.

In this sense is Kalidasa's 'Shakunthala' tragic? ಎನ್ನುವ ಪ್ರಶ್ನೆಯನ್ನು ಚರ್ಚಿಸಿದರು. ಪ್ರಸಿದ್ಧ ನಾಟಕ Hamlet ನ್ನು ವಿಮರ್ಶಿಸಿ ನಮಗೆ ಹಲವು ಪ್ರಶ್ನೆಗಳನ್ನು ಹಾಕಿ ಉತ್ತರವನ್ನು ಪಡೆದರು. ಹೀಗೆ ಈಸ್ಕಲಸ್, ಸಫೋಕ್ಲಿಸ್, ಯೂರಿಪಿಡೀಸ್ ಮೊದಲಾದ ಗ್ರೀಕ್ ನಾಟಕಕಾರರು, ಷೇಕ್ಸ್‌ಪಿಯರ್ ಮತ್ತು ಕಾಳಿದಾಸ ಇವರ ಸಾಧನೆಯನ್ನು ಪರಿಚಯ ಮಾಡಿಕೊಟ್ಟರು. ಮುಂದೆ ಇವರ ಕೆಲವು ನಾಟಕಗಳ ಪರಿಚಯವನ್ನು ಮಾಡಿಕೊಟ್ಟರು. ಹೀಗೆ ನಮಗೆ ತೌಲನಿಕ ಅಧ್ಯಯನದ ಅಭ್ಯಾಸವು ಪರಿಚಯವಾಯಿತು. ನಮ್ಮ ಅಭ್ಯಾಸವು ಮುಂದುವರಿದಂತೆ ತೌಲನಿಕ ವಿಮರ್ಶೆಯನ್ನು ರಕ್ತಗತಗೊಳಿಸಿಕೊಂಡೆವು.

ಆಚಾರ್ಯ ಬಿ.ಎಂ.ಶ್ರೀ. ಅವರೇ ಒಮ್ಮೆ ನನಗೆ "ನೀವು ನಿಮ್ಮ ವೃತ್ತಿಗಾಗಿ ಓದಿರುವುದರಲ್ಲಿ ಒಂದು ಭಾಗವನ್ನು ಲೇಖನವನ್ನಾಗಿ ಬರೆದರೆ ಕನ್ನಡಿಗರಿಗೆ ಉಪಕಾರವಾಗುತ್ತದೆ. ಅವರು ಸಂತೋಷ ಪಡುತ್ತಾರೆ." ಎಂದು ಹೇಳಿದರು. 'ಕನ್ನಡವನ್ನು ಉಳಿಸಿ ಬೆಳೆಸುವ ಕಾರ್ಯವನ್ನು ನಿಮ್ಮ ಪೀಳಿಗೆಗೆ ವಹಿಸು

ಎಂದು ಹೇಳಿದ್ದ ಗುರುಗಳ ಅಣತಿಯನ್ನು ಎಷ್ಟರಮಟ್ಟಿಗೆ ಪಾಲಿಸಿದ್ದೀನೆಯೊ ತಿಳಿಯದು. ಆದರೆ ಅದನ್ನು ಪಾಲಿಸಲು ನನ್ನಿಂದಾದಷ್ಟು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತೇನೆ.

**೨೨. ಎಚ್.ಎಸ್. ದೊರೆಸ್ವಾಮಿ : ೧೦-೪-೧೯೧೮**

ಬಿ.ಎಂ.ಶ್ರೀಕಂಠಯ್ಯನವರು ಸೆಂಟ್ರಲ್ ಕಾಲೇಜಿನಲ್ಲಿ ನನಗೆ ವಿದ್ಯಾಗುರುಗಳಾಗಿದ್ದರು. ಅವರು ಇಂಗ್ಲಿಷ್ ಸಾಹಿತ್ಯವನ್ನು ಬೋಧಿಸುತ್ತಿದ್ದರು. ನನಗೆ ಷೇಕ್ಸ್‌ಪಿಯರ್‌ನ ನಾಟಕದ ಪಾಠ ಮಾಡುತ್ತಿದ್ದರು. ಕಣ್ಣಿಗೆ ಕಟ್ಟುವಂತೆ ನಾಟಕದ ದೃಶ್ಯಗಳನ್ನು ತಮ್ಮದೇ ಹಾವಭಾವದಲ್ಲಿ ಪರಿಚಯಿಸುತ್ತಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಕನ್ನಡ ನಾಡು, ನುಡಿ, ಸಂಸ್ಕೃತಿ, ಇತಿಹಾಸದ ಬಗೆಗೆ ಆಳವಾಗಿ ಅಭ್ಯಾಸ ಮಾಡಿದ್ದರು. ಕನ್ನಡದ ವಿದ್ವಾಂಸರನ್ನು ಆಹ್ವಾನಿಸಿ ಅವರಿಂದ ಭಾಷಣ ಮಾಡಿಸುತ್ತಿದ್ದರು. ಕನ್ನಡಕ್ಕೆ ಸೇವೆ ಮಾಡುವ ಮಹನೀಯರನ್ನೆಲ್ಲಾ ನೋಡುವ ಅವರ ವಾಗ್ಝರಿಯನ್ನು ಸವಿಯುವ ಅವಕಾಶವನ್ನು ಯುವಕರಾಗಿದ್ದ ನಮಗೆ ಒದಗಿಸಿಕೊಡುತ್ತಿದ್ದರು. ಅವರ ಅಧಿಕಾರದ ಅವಧಿಯಲ್ಲಿ ಪರಿಷತ್ತಿನ ಕನ್ನಡದ ಪರೀಕ್ಷೆಗಳಾದ ಜಾಣ, ಕಾವ ನಡೆಸಲು ಪ್ರಾರಂಭ ಮಾಡಿದರಲ್ಲದೆ ನಮಗೆ ಕನ್ನಡದಲ್ಲಿ ಅಭಿಮಾನ ಹುಟ್ಟಲು, ಹಳೆಗನ್ನಡ, ನಡುಗನ್ನಡ, ಹೊಸ ಗನ್ನಡ, ಸಾಹಿತ್ಯವನ್ನು ಪರಿಚಯ ಮಾಡಿಕೊಳ್ಳಲು ನೆರವಾದರು.

ಕನ್ನಡ ಜಾಣ ತರಗತಿಯ ಮೊದಲ ತಂಡದ ವಿದ್ಯಾರ್ಥಿ ಎಂದು ಹೇಳಿಕೊಳ್ಳಲು ಹೆಮ್ಮೆಯೆನಿಸುತ್ತದೆ. ಅವರೇ ನಮ್ಮ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು ಎನ್ನುವುದು ಒಂದು ವಿಶೇಷ.

'ಕನ್ನಡ ಬಾವುಟ, ಕನ್ನಡ ಕೈಪಿಡಿ, ಗದಾಯುದ್ಧ ನಾಟಕಗಳನ್ನು ರಚಿಸಿದ ಬಿ.ಎಂ.ಶ್ರೀ ಅವರೇ ಆ ಪುಸ್ತಕಗಳ ಪಾಠ ಮಾಡುತ್ತಿದ್ದರು. 'ಬುದ್ಧ ಚರಿತ್ರೆ'ಯನ್ನು ಬರೆದ ಸಿ.ಕೆ.ವೆಂಟಕರಾಮಯ್ಯ, ಯಶೋಧರ ನಾಟಕ ಬರೆದ ಮಾಸ್ತಿಯವರು ನಮಗೆ ಬೋಧಕರಾಗಿದ್ದರು. ಈ ಮಹನೀಯರಲ್ಲದೆ ವಿ.ಸೀತಾರಾಮಯ್ಯ, ಬಿ.ವೆಂಕೋಬರಾಯರು, ದೇವಡು ನರಸಿಂಹಶಾಸ್ತ್ರಿಗಳು ನಮ್ಮ ತರಗತಿಗೆ ಬೋಧಿಸುತ್ತಿದ್ದರು. ಬಿ.ಎಂ.ಶ್ರೀ. ಕರ್ನಾಟಕದ ಏಕೀಕರಣದ ನಾಂದಿ ಹಾಡಿದವರಲ್ಲಿ ಒಬ್ಬರು. ದಸರ ಮತ್ತು ಬೇಸಿಗೆಯ ರಜಾದಿನಗಳಲ್ಲಿ ಉತ್ತಮ ವಾಗ್ಮಿಗಳನ್ನು, ಸಾಹಿತಿಗಳನ್ನು ಕರ್ನಾಟಕದಾದ್ಯಂತ ಕಳುಹಿಸಿ ಅವರಿಂದ ವಿಶೇಷ

ಭಾಷಣಗಳನ್ನು ಏರ್ಪಡಿಸುತ್ತಿದ್ದರು. ತಾವೂ ಎಲ್ಲೆಡೆ ಪ್ರವಾಸ ಮಾಡಿ ಹಂಚಿಹೋಗಿರುವ ಕರ್ನಾಟಕವನ್ನು ಒಂದುಗೂಡಿಸಿ ಅಖಂಡ ಕರ್ನಾಟಕ ರಚಿಸುವ ಬಗೆಗೆ ಜನಜಾಗೃತಿಯ ಕೆಲಸವನ್ನು ಅವ್ಯಾಹತವಾಗಿ ಮಾಡಿದರು.

ಬಿ.ಎಂ.ಶ್ರೀ. ಮಂಡ್ಯ ಜಿಲ್ಲೆಯ ಬೆಳ್ಳೂರಿನವರು. ಅಲ್ಲಿರುವ ಅವರ ಮನೆಯನ್ನು ಸಾರ್ವಜನಿಕ ವಾಚನಾಲಯವನ್ನಾಗಿ ಮಾಡಲಾಗಿದೆ. ಅವರ ಪುತ್ಥಳಿಯನ್ನು ಬೆಳ್ಳೂರಿನಲ್ಲಿ ಅನಾವರಣಗೊಳಿಸಲಾಗಿದೆ.

ಬಿ.ಎಂ.ಶ್ರೀ ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಓದುತ್ತಿದ್ದಾಗ ನಡೆದ ಘಟನೆಯೊಂದನ್ನು ನಮ್ಮ ತರಗತಿಯಲ್ಲಿ ಹೇಳಿದ್ದು ಈಗಲೂ ನನ್ನ ಕಿವಿಯಲ್ಲಿ ಗುಯಿಗುಟ್ಟುತ್ತಿದೆ. ಅವರ ತರಗತಿಯನ್ನು ಒಬ್ಬ ಆಂಗ್ಲ ಪ್ರೊಫೆಸರ್ ತೆಗೆದುಕೊಳ್ಳುತ್ತಿದ್ದರು. ಆತನಿಗೆ ಕಾಲು ಸ್ವಲ್ಪ ಐಬಾಗಿತ್ತು. ಒಂದು ದಿನ ಅವರು ಪಾಠ ಮಾಡಲು ವೇದಿಕೆ ಹತ್ತುತ್ತಿದ್ದಾಗ ಮುಗ್ಗರಿಸಿ ಬಿದ್ದರು. ವಿದ್ಯಾರ್ಥಿಗಳು ನಕ್ಕರು. ಬಿದ್ದಾದ ನೋವಿಗಿಂತ ವಿದ್ಯಾರ್ಥಿಗಳು ನಕ್ಕಿದ್ದರಿಂದ ಅವರಿಗೆ ಹೆಚ್ಚು ನೋವಾಯಿತಂತೆ. ಆ ನೋವು ಅವರ ಮುಖದಲ್ಲಿ ಕಾಣಿಸಿಕೊಂಡಿತು. ಹಾಗೆ ನಕ್ಕಿದ್ದವರಲ್ಲಿ ನಾನೂ ಒಬ್ಬ. ಅವರ ಮನಸ್ಸಿನ ನೋವನ್ನು ನೋಡಿನಕ್ಕ ನಾವು ಮೃಗೀಯವಾಗಿ ವರ್ತಿಸಿದೆವು ಎಂದು ನನಗನ್ನಿಸಿತು. ಕೂಡಲೇ ನಾನು ತಲೆ ತಗ್ಗಿಸಿ 'ಈ ಘಟನೆ ಪದೇ ಪದೇ ನನ್ನನ್ನು ಕಾಡುತ್ತದೆ. ಇನ್ನೆಂದೂ ಈ ರೀತಿ ಬರ್ಬರವಾಗಿ ನನ್ನ ಜೀವಮಾನದಲ್ಲಿ ನಡೆದುಕೊಳ್ಳಬಾರದು ಎಂದು ಸಂಕಲ್ಪ ಮಾಡಿದೆ', ಎಂದು ಹೇಳಿ ಕಣ್ಣೀರನ್ನು ಒರೆಸಿಕೊಂಡರು.

ಬಿ.ಎಂ.ಶ್ರೀ.ಯವರ ಐವತ್ತೇಳನೆಯ ಹುಟ್ಟಿದ ಹಬ್ಬದ ಸಮಾರಂಭ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆಯಿತು. ಅವರ ಶಿಷ್ಯರನೇಕರು, 'ಸಂಭಾವನೆ' ಗ್ರಂಥಕ್ಕೆ ಲೇಖನಗಳನ್ನು ಬರೆದಿದ್ದಾರೆ. ಆ ಸಂದರ್ಭದಲ್ಲಿ ಒಂದು ಭಾರಿ ಭೋಜನ ಕೂಟದ ಏರ್ಪಾಡಾಗಿತ್ತು. ಊಟದ ಸಮಯದಲ್ಲಿ ಗಮಕ ಶಿಖಾಮಣಿಗಳಾದ ಕಳಲೆ ಸಂಪತ್ಕುಮಾಚಾರ್ಯರು ಹಾಡಿದರು. ಜೈಲರ್ ಆಗಿದ್ದ ಅಮೀರ್ ಸಾಹೇಬರು ಕುಮಾರವ್ಯಾಸ ಭಾರತದಿಂದ ಆಯ್ದ ಪದ್ಯವನ್ನು ಸುಶ್ರಾವ್ಯವಾಗಿ ಹಾಡಿದ್ದನ್ನು ಮರೆಯುವಂತಿಲ್ಲ. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ 'ಕನ್ನಡ ನುಡಿ'ಯ ಸಮರ್ಥ ಸಂಪಾದಕರಾಗಿದ್ದರು. ಆ ಅವಧಿಯಲ್ಲಿ ಒಂದು ಸಾಹಿತ್ಯ ಸಮ್ಮೇಳನ ನಡೆಯಿತು. ಆರ್. ದಿವಾಕರರು ಸಮ್ಮೇಳನದ ಅಧ್ಯಕ್ಷರಾಗಿದ್ದರು. ಆಗವರು ಸಮ್ಮೇಳನದ ವೇದಿಕೆಯಿಂದ 'ಭಾರತದ ದೃಷ್ಟಿಯಿಂದ ಕನ್ನಡ ನಾಡಿನಲ್ಲಿ ಕನ್ನಡ ಮತ್ತು ಹಿಂದಿಗೆ ಪ್ರಧಾನ್ಯತೆ ನೀಡಬೇಕೆಂದು ಹೇಳಿದರು.

ಕನ್ನಡ ನುಡಿಯ ಸಂಪಾದಕರಾಗಿದ್ದ ಅ.ನ.ಕೃಷ್ಣರಾಯರು ಸಂಪಾದಕೀಯದಲ್ಲಿ ಅವರ ಹಿಂದಿಯ ಒಲವನ್ನು ಅಲ್ಲಗಳೆದರು. ಅಧ್ಯಕ್ಷರಾಗಿದ್ದ ಬಿ.ಎಂ.ಶ್ರೀ. ಅ.ನ.ಕೃ. ಅವರ ಸಂಪಾದಕೀಯವನ್ನು ಓದಿ 'ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಅಭಿಪ್ರಾಯವನ್ನು ಬೇರೆಯವರು ಒಪ್ಪಲಿ ಬಿಡಲಿ, ಸಮ್ಮೇಳನವನ್ನು ಏರ್ಪಡಿಸಿದ್ದ ಕನ್ನಡ ಸಾಹಿತ್ಯ ಪರಿಷತ್ತು ದಿವಾಕರರಿಗೆ, ಅವರ ನಿಲುವಿಗೆ ಗೌರವ ಸೂಚಿಸಬೇಕಲ್ಲದೆ ಅವರನ್ನು ಟೀಕೆ ಮಾಡಬಾರದು ಎಂಬ ನಿಲುವನ್ನು ತಾಳಿದರು. ನಂತರ ಅ.ನ.ಕೃ. ಅವರನ್ನು ಸಂಪಾದಕತ್ವದ ಜವಾಬ್ದಾರಿಯಿಂದ ನಿರ್ಗಮಿಸಲು ಕೋರಿದರು.

ತಿರುಮಲಾ ತಾತಾಚಾರ್ಯಶರ್ಮರು 'ವಿಶ್ವ ಕರ್ನಾಟಕ' ದಿನಪತ್ರಿಕೆಯನ್ನು ನಡೆಸುತ್ತಿದ್ದರು. ಅವರದು ಗಂಡು ಶೈಲಿಯ ಕನ್ನಡ–ಕಾಂಗ್ರೆಸ್ಸಿಗೆ ಬೆಂಬಲವಾಗಿ ನಿಂತಿದ್ದ ಪತ್ರಿಕೆಯದು ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರಲ್ಲಿ ಬಿ.ಎಂ.ಶ್ರೀ.ಗೆ ಅಪಾರ ಭಕ್ತಿಯುಳ್ಳವರಾಗಿದ್ದು ಮೈಸೂರು ಕಾಂಗ್ರೆಸ್ಸಿನ ಜವಾಬ್ದಾರಿಯಲ್ಲಿ ಸರ್ಕಾರ ಸ್ಥಾಪನೆಯಾಗಬೇಕೆಂಬ ನಿಲುವನ್ನು ವಿರೋಧಿಸಿದ್ದರು. ಹೊಸಪೇಟೆಯಲ್ಲಿ ಕಾಂಗ್ರೆಸ್ಸಿನ ವಿರೋಧ ಅವರು ಮಾಡಿದ ಭಾಷಣ ಒಂದು ದಾಖಲೆಯಾಗಿದೆ.

ತಾತಾಚಾರ್ಯ ಶರ್ಮರು ಹೊಸಕೋಟೆ ಕೃಷ್ಣಶಾಸ್ತ್ರಿಗಳ ನೇತೃತ್ವದಲ್ಲಿ ಕೆಲಸ ಮಾಡಿದವರು, ಅವರ ಕನ್ನಡ ಶೈಲಿಯನ್ನು ಬಿ.ಎಂ.ಶ್ರೀ. ಮೆಚ್ಚಿಕೊಂಡಿದ್ದರು. ಒಂದು ಒಳ್ಳೆಯ ಕನ್ನಡ ಪತ್ರಿಕೆಯನ್ನು ಹೊರತರುವ ಸಂಪಾದಕರೆಂದು ಶರ್ಮರನ್ನು ಶ್ಲಾಘನೆ ಮಾಡುತ್ತಿದ್ದರು. ಕಾಂಗ್ರೆಸ್ ಪರವಾಗಿ ಮಹಾರಾಜರ ಆಡಳಿತದ ವಿರುದ್ಧವಾಗಿ ಅವರು ಆಗಾಗ ಬರೆಯುತ್ತಿದ್ದುದರಿಂದ ಪತ್ರಿಕೆಗೆ ಜುಲ್ಮಾನೆ ವಿಧಿಸುವುದು. ಕೆಲದಿನ ಪತ್ರಿಕೆ ನಿಲ್ಲಿಸುವುದು, ಠೇವಣಿ ಕಟ್ಟಬೇಕೆಂದು ನೋಟೀಸ್ ನೀಡುವುದು ನಡದೇ ಇತ್ತು. ಪತ್ರಿಕೆ ನಿಂತುಹೋದಾಗ 'ಶ್ರೀ'ಯವರಿಗೆ ಒಂದು ಶ್ರೇಷ್ಠ ಕನ್ನಡ ಪತ್ರಿಕೆಯನ್ನು ಓದುವ ಅವಕಾಶ ತಪ್ಪಿ ಹೋಯಿತಲ್ಲ ಎಂದು ಬೇಸರವಾಗುತ್ತಿತ್ತು. 'ಈ ಶರ್ಮ ಸರ್ಕಾರಕ್ಕೆ ಇರಿಸು ಮುರಿಸಾಗುವಂತೆ ಬರೆದು ಪತ್ರಿಕೆ ನಿಂತುಹೋಗಿ ಓದುಗರಿಗೆ ಅನ್ಯಾಯ ಮಾಡುತ್ತಿದ್ದಾರಲ್ಲ' ಎಂದು ಬಿ.ಎಂ.ಶ್ರೀ. ನನ್ನೊಂದಿಗೆ ಹೇಳುತ್ತಿದ್ದರು.

ಕನ್ನಡ ನಾಡಿನ ಹೆಮ್ಮೆ ಎನಿಸಿದ್ದರು ಬಿ.ಎಂ.ಶ್ರೀ. ಅವರ ಗತ್ತು, ಗಾಂಭೀರ್ಯ, ಕನ್ನಡ ಪ್ರೇಮ, ವಿದ್ವತ್ತು, ಮಾತುಗಾರಿಕೆಯ ವೈಖರಿ ಇವುಗಳು ನಮ್ಮನ್ನು ಮಂತ್ರಮುಗ್ಧರನ್ನಾಗಿ ಮಾಡಿದ್ದವು. ಇಂತಹ ಪುಣ್ಯ ಪುರುಷರ ಸ್ಮರಣೆ ಮಾಡುವುದು ಗಂಗೆಯಲ್ಲಿ ಮಿಂದಂತೆ ನೆಮ್ಮದಿ ನೀಡುವುದು.

ಭಾಗ-೭

# ಬಿ.ಎಂ.ಶ್ರೀ : ನನ್ನ ನೆನಪುಗಳು

'ಅಣ್ಣಯ್ಯ'ನವರನ್ನು ಕುರಿತ ಕೆಲವು ನೆನಪುಗಳು ಅಪೂರ್ವ ಸ್ಮೃತಿಚಿತ್ರಗಳಾಗಿ ನನ್ನಲ್ಲಿ ಉಳಿದುಕೊಂಡಿದ್ದು ಅವುಗಳನ್ನು ನಿಮ್ಮ ಮುಂದಿಡುತ್ತಿದ್ದೇನೆ.

ಮಂಡ್ಯದಲ್ಲಿ ನಡೆದ ಅಕ್ಕನ ಮದುವೆಗೆ ಅಣ್ಣಯ್ಯ ಮಗಳು ಶಾರದಮ್ಮ, ಮೊಮ್ಮಗಳು ವಿಶಾಲಾಕ್ಷಿಯೊಡನೆ ಆಗಮಿಸಿದ್ದರು. ಅವರ ವಾಸ್ತವ್ಯಕ್ಕೆ ಅಪ್ಪ ಪ್ರತ್ಯೇಕವಾದ ಮನೆಯಲ್ಲಿ ವ್ಯವಸ್ಥೆ ಮಾಡಿದ್ದರು. ತಂದೆಯ ಸ್ಥಾನದಲ್ಲಿರುವ ಅಣ್ಣನಿಗೆ ಯಾವ ತೊಂದರೆಯೂ ಆಗಬಾರದೆಂದು ತಮ್ಮನ ಮುಂಜಾಗ್ರತೆ.

ಅಣ್ಣ ತಮ್ಮಂದಿರಿಗೆ ತುಂಬ ಹೋಲಿಕೆ. ಇಬ್ಬರದೂ ಸಾಮಾನ್ಯ ಎತ್ತರ, ಸಾಧಾರಣವಾದ ಮೈಕಟ್ಟು, ದುಂಡು ಮುಖ, ಏರಿ ಹಣೆ, ವಿಶಾಲವಾದ ಕಣ್ಣುಗಳು, ಮುದ್ದಾಗಿದ್ದ ಮುಖಕ್ಕೆ ತಕ್ಕಂತೆ ಪುಟ್ಟ ನಾಸಿಕ, ಹಾಲಿಗೆ ತುಸು ಕೇಸರಿ ಬೆರೆಸಿದಂತಿದ್ದ ಆಕರ್ಷಕ ಮೈಬಣ್ಣ – ಒಟ್ಟಿನಲ್ಲಿ ಇಬ್ಬರೂ ಸ್ಫುರದ್ರೂಪಿಗಳು ಒಮ್ಮೆ ನೋಡಿದವರು ಮತ್ತೆ ಮತ್ತೆ ಅವರನ್ನು ನೋಡಿ ಕಣ್ಣುಗಳಿಗೆ ಹಬ್ಬ ಮಾಡಿಕೊಳ್ಳುವಂತಿದ್ದರು.

ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಡಾ: ಎಸ್.ವಿ.ರಂಗಣ್ಣನವರು ಲೇಖನವೊಂದರಲ್ಲಿ ಬಿ.ಎಂ.ಶ್ರೀ.ಯವರನ್ನು ಈ ರೀತಿ ವರ್ಣಿಸಿದ್ದಾರೆ.

"ದುಂಡು ದುಂಡಾದ ಮಧ್ಯ ಎತ್ತರದ ಭವ್ಯ ದೇಹಾಕೃತಿ. ಅಗಲವಾದ ನಸುಕೆಂಪಿನ ಗಂಭೀರ ಹಣೆ. ಉಬ್ಬಿದ ತಿಳಿಕೆಂಪಿನ ಲವಲವಿಕೆಯ ಕೆನ್ನೆಗಳು, ತೀಕ್ಷ್ಣವೂ ಆಲೋಚನಾಪೂರಿತವೂ ಅತ್ಯುತ್ಸಾಹ ಸೂಚಕವೂ ನಗುವನ್ನು ಸೂಸುವುದೂ ಆದ ಉಜ್ವಲ ಕಾಂತಿಯ ಕಣ್ಣುಗಳು, ಸ್ವಲ್ಪ ಸಣ್ಣದಾದರೂ ಮುಖಕ್ಕೆ ಮುದ್ದಾಗಿ ಹೊಂದಿಕೊಂಡ ನಾಸಿಕ. ಮಂದಸ್ಮಿತದಿಂದ ಕೂಡಿದ್ದರೂ ದೃಢತೆ ಕಾಠಿಣ್ಯಗಳನ್ನು ವ್ಯಕ್ತಪಡಿಸುವ ಸ್ಪಷ್ಟ ತುಟಿಗಳು, ಕೆಳಗಲ್ಲದ ಹಿಂಬದಿಯಿಂದ

ಮೇಲಕ್ಕೆದ್ದು ಕೆಳಗುಳಿಯೊಂದರಿಂದ ಕೊಂಚ ಇಬ್ಬಗೆಯಾದ ನುಣ್ಣನೆಯ ರಂಜಕ ಗಲ್ಲ. ಎಲ್ಲಕ್ಕಿಂತ ಲೋಕನಾಗ್ರಹದಿಂದ ಅವುಡಿನವರೆಗೆ ಇಳಿದು ಬಂದು ಕವಳುಗಳನ್ನು ಮೂಗು ಬಾಯಿಗಳಿಂದ ಪ್ರತ್ಯೇಕಿಸುವ ಗೆಲುವಿನಿಂದ ಕೂಡಿದ ಎರಡು ಗೀರುಗಳು; ಒಟ್ಟಿನಲ್ಲಿ ಒಂದು ಸಾರಿ ನೋಡಿದರೆ ಸಾಕು, ಪ್ರೇಕ್ಷಕರ ಚಿತ್ತಭಿತ್ತಿಯಲ್ಲಿ ಕೊರೆದು ನಿಲ್ಲುವ ಅಂಬಾರಿ ಆನೆಯಂದದ ಠೀವಿಯ ಮುಖಮುದ್ರೆ; ಏರಲೂ ಬಲ್ಲ, ಇಳಿಯಲೂ ಬಲ್ಲ ಇಂಪಾದ ಕುಗ್ಗದ ದನಿ. ಆಗಾಗ ಮೇಲಕ್ಕೆದ್ದು ಪ್ರತಿಪಾದಿಸುವ ಅಂಶವನ್ನು ಒತ್ತಿ ಹೇಳುವ ಭಂಗಿಯನ್ನು ತಾಳುವ, ಉಚಿತಾಕಾರದ ಕೈಗಳು, ತಾವರೆಯಂತೆ ಕೆಂಪಾದ ಕೋಮಲವಾದ ಅಂಗೈ, ಹಾಗೆಯೇ ರಕ್ತ ಸೋರುತ್ತಿದೆಯೊ ಎನ್ನುವಂತೆ ಕಾಣುತ್ತಿದ್ದ ಶುಭ್ರ ಸುಂದರವಾದ ಹೆಜ್ಜೆಗಳು, ಆ ಅಂಗೈ ಅಂಗಾಲುಗಳ ಹತ್ತಿರ ಕುಳಿತು ದರ್ಶಿಸಿದವನು ಧನ್ಯನು....."

ಅಣ್ಣಯ್ಯ ಮನೆಯಲ್ಲಿ ದಟ್ಟಿ ಪಂಜೆಯುಟ್ಟು ಮೇಲೊಂದು ಜುಬ್ಬ ಇಲ್ಲವೆ ಷರಟು ಧರಿಸುತ್ತಿದ್ದರು. ಮನೆಯಿಂದ ಹೊರಗೆ ಹೋಗುವಾಗ ಸೂಟು ಧರಿಸಿ ತಲೆಗೆ ಜರತಾರಿ ರುಮಾಲು ಹಾಕುತ್ತಿದ್ದರು. ಹೆಚ್ಚು ಮಾತನಾಡದೆ ತಮ್ಮ ಪಾಡಿಗೆ ತಾವಿರುತ್ತಿದ್ದರು. ಶಾಂತ ಸ್ವಭಾವದವರು, ಕೋಪ ಮಾಡಿಕೊಳ್ಳುತ್ತಿರಲಿಲ್ಲ. ಅಪರೂಪಕ್ಕೆ ಸಿಟ್ಟು ಬಂದರೆ ರೌದ್ರಾವತಾರ ತಾಳುತ್ತಿದ್ದರು.

ಅಣ್ಣಯ್ಯ ಸಾಹಿತ್ಯ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಹಲವಾರು ಬಾರಿ ಮಂಡ್ಯಕ್ಕೆ ಆಗಮಿಸಿ ನಮ್ಮ ಮನೆಯಲ್ಲಿ ತಂಗಿದ್ದಾಗ ನನಗೆ ಅವರನ್ನು ನೋಡಿದ ನೆನಪು! ಅವರು ಬರುತ್ತಾರೆ ಎನ್ನುವ ಸುದ್ದಿಯೇ ನಮ್ಮ ಮನೆಯ ವಾತಾವರಣ ವನ್ನು ಬದಲಾಯಿಸುತ್ತಿತ್ತು. ಅವರಿಗಾಗಿ ಒಂದು ಕೊಠಡಿ ಸಿದ್ಧವಾಗುತ್ತಿತ್ತು. ಮನೆ ಶುಭ್ರವಾಗುತ್ತಿತ್ತು. ಅವರಿಗೆ ಪ್ರಿಯವಾದ ತಿಂಡಿಗಳನ್ನು ಅಮ್ಮ ಮಾಡಿ ಡಬ್ಬಗಳಲ್ಲಿ ತುಂಬಿಡುತ್ತಿದ್ದಳು. ಅಣ್ಣಯ್ಯನಿಗೆ ಇಷ್ಟವಾದ ಅಂಜೂರದ ಹಣ್ಣುಗಳನ್ನು ಅಪ್ಪ, ಅಂಗಡಿಯಿಂದ ತಂದು ನಮ್ಮ ಕೈಗೆ ಸಿಕ್ಕದಂತೆ ಮುಚ್ಚಿಡುತ್ತಿದ್ದರು.!

ನಾವು ಏಳು ಜನ ಮಕ್ಕಳು. ತಲೆ ಬಲಿಯದ ಎಳಸುಗಳು, ಬಾಲವಿಲ್ಲದ ಕಪಿಗಳು! ಗಲಾಟೆ, ಗುದ್ದಾಟ, ತುಂಟತನ ನಮ್ಮ ಜೀವಾಳವಾಗಿದ್ದವು. 'ನಾಳೆ ಅಣ್ಣಯ್ಯ ಬರುತ್ತಾರೆ, ಎರಡು ಮೂರು ದಿನ ಇರುತ್ತಾರೆ. ಗಲಾಟೆ ಮಾಡಿ ಏಟು ತಿನ್ನಬೇಡಿ, ಜಾಣರಾಗಿರಿ! ಎಂದು ಅಮ್ಮ ನಮ್ಮನ್ನು ಎಚ್ಚರಿಸುತ್ತಿದ್ದಳು.

ಬೆಂಗಳೂರಿನಲ್ಲಿ ನಡೆದ ಅಣ್ಣಯ್ಯನವರ ಹುಟ್ಟಿದ ಹಬ್ಬದ ಸಮಾರಂಭಕ್ಕೆ ಅಪ್ಪ ಅಮ್ಮನೊಡನೆ ಹೋಗಿದ್ದ ನೆನಪು! ಆಗವರಿಗೆ ಶಿಷ್ಯರು ಬಂಧುಮಿತ್ರರು

ಗ್ರಂಥ ಸಮರ್ಪಿಸಿ ಸನ್ಮಾನಿಸಿದಾಗ ಅವರು ಸಾಮಾನ್ಯ ವ್ಯಕ್ತಿಯಲ್ಲ, ಗಣ್ಯವ್ಯಕ್ತಿ, ಎನ್ನುವುದು ಸ್ಪಷ್ಟವಾದರೂ ದೊಡ್ಡಪ್ಪನವರ ದೊಡ್ಡತನವನ್ನು ಅರಿಯಲಾರದಷ್ಟು ದಡ್ಡಳಾಗಿದ್ದೆ. ಕಾರಣ ನಾನಾಗ ಐದು ವರ್ಷದ ಬಾಲಕಿ.

ಮಹಾರಾಜ ಕಾಲೇಜಿನಲ್ಲಿ ಬಿ.ಎ. ವಿದ್ಯಾರ್ಥಿಯಾಗಿದ್ದಾಗ ಅಣ್ಣಯ್ಯನವರ 'ಗದಾಯುದ್ಧ ನಾಟಕಂ' ನನಗೆ ಪಠ್ಯಪುಸ್ತಕವಾಗಿತ್ತು. 'ಬಿ.ಎಂ.ಶ್ರೀಕಂಠಯ್ಯನವರು ನನ್ನ ದೊಡ್ಡಪ್ಪ' ಎಂದು ಸಹಪಾಠಿಗಳಲ್ಲಿ ಹೆಮ್ಮೆಯಿಂದ ಹೇಳಿಕೊಂಡು ಬೀಗಿದೆ. ಆ ನಾಟಕವನ್ನು ನಮಗೆ ಬೋಧಿಸಿದವರು ತ.ಸು.ಶ್ಯಾಮರಾಯರು. ಪಾಠ ಮಾಡುವಾಗ ಭೀಮ, ದುರ್ಯೋಧನರ ಪಾತ್ರಗಳನ್ನು ಸಂಭಾಷಣೆ ಮತ್ತು ಅಭಿನಯದೊಂದಿಗೆ ನಮ್ಮ ಮುಂದೆ ತಂದು ನಿಲ್ಲಿಸುತ್ತಿದ್ದರು. ಆಗ ನಮಗೆ 'ಗದಾಯುದ್ಧ ನಾಟಕ' ವನ್ನೇ ನೋಡಿದ ಅನುಭವವಾಗುತ್ತಿತ್ತು.

'ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದ ಡಾ: ಹಾ.ಮಾ.ನಾಯಕರು ನನ್ನನ್ನೊಮ್ಮೆ ತಮ್ಮ ಕಛೇರಿಗೆ ಬರಮಾಡಿಕೊಂಡು ಹೇಳಿದರು.

"ನೀವು ಬಿ.ಎಂ.ಶ್ರೀ ತಮ್ಮನ ಮಗಳೆಂದು ತಿಳಿಯಿತು. ನಮ್ಮ ವಿಶ್ವವಿದ್ಯಾನಿಲಯದ ವಸ್ತು ಸಂಗ್ರಹಾಲಯಕ್ಕೆ ಬಿ.ಎಂ.ಶ್ರೀಯವರ ಭಾವಚಿತ್ರಗಳು, ಅವರು ಉಪಯೋಗಿಸುತ್ತಿದ್ದ ಕೆಲವು ವಸ್ತುಗಳನ್ನು ಕೊಡಿಸಿದರೆ ತುಂಬ ಉಪಕಾರವಾಗುತ್ತದೆ. ಅವುಗಳನ್ನು ವಸ್ತು ಸಂಗ್ರಹಾಲಯದಲ್ಲಿಟ್ಟು ಸಾರ್ವಜನಿಕರಿಗೆ ಪ್ರದರ್ಶಿಸುತ್ತೇವೆ."

ಬಿ.ಎಂ.ಶ್ರೀಯವರ ಮೊಮ್ಮಗಳು ವಿಶಾಲಾಕ್ಷಿಯ ಬಳಿ ಅವರ ವಸ್ತುಗಳು ಇದೆಯೆಂಬುದು ಗೊತ್ತಿದ್ದುದರಿಂದ ಅವರನ್ನು ಹಾ.ಮಾ.ನಾಯಕರಿಗೆ ಪರಿಚಯ ಮಾಡಿಸಿದೆ. ಆಕೆ ಕೆಲವು ವಸ್ತುಗಳನ್ನು ವಸ್ತು ಸಂಗ್ರಹಾಲಯಕ್ಕೆ ನೀಡಿದರು. ಆ ಸಂದರ್ಭದಲ್ಲಿ ಅವರ ಬಳಿಯಿದ್ದ ಟಿ.ಚೌಡಯ್ಯನವರ ಪಿಟೀಲು ವಾದ್ಯವನ್ನೂ ನೀಡಿ ಔದಾರ್ಯ ಮೆರೆದರು.

೧೯೭೭ ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟ 'ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ', ೧೯೮೫ ರಲ್ಲಿ ಬೆಳ್ಳೂರಿನಲ್ಲಿ ಉದ್ಘಾಟನೆಯಾದ ಆಚಾರ್ಯ ಬಿ.ಎಂ.ಶ್ರೀ. ಶತಮಾನ ಭವನ–ಈ ಎರಡೂ ಸ್ಮಾರಕಗಳ ಪ್ರಾರಂಭೋತ್ಸವ ಸಮಾರಂಭಗಳಲ್ಲಿ ಆಹ್ವಾನಿತಳಾಗಿ ಪಾಲ್ಗೊಂಡಿದ್ದೆ. ಈ ಸಂಸ್ಥೆಗಳ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ಅವರ ಬದುಕು– ಬರಹ ಕುರಿತು ಮಾತನಾಡಿದ್ದುಂಟು ಅವೆಲ್ಲವೂ ಮರೆಯಲಾರದ ನೆನಪುಗಳಾಗಿ ಮನದಲ್ಲಿ ಉಳಿದಿವೆ.

'ಅಣ್ಣಯ್ಯ'ನವರ ಜನ್ಮಸ್ಥಳ ಸಂಪಿಗೆ, ತುಮಕೂರು ಜಿಲ್ಲೆಯಲ್ಲಿರುವ ಒಂದು ಗ್ರಾಮ. ೧೯೮೪ ರಲ್ಲಿ ಆ ಊರಿನವರು ಅವರ ಜನ್ಮ ಶತಮಾನೋತ್ಸವವನ್ನು ಆಚರಿಸಿ ಆಹ್ವಾನಿಸಿದ್ದರು. ಆ ಸಮಾರಂಭದಲ್ಲಿ ನಾನು ಭಾಗವಹಿಸಿದ್ದಲ್ಲದೆ ಅಣ್ಣಯ್ಯ ಜನಿಸಿದ ಮನೆಯನ್ನು ವೀಕ್ಷಿಸಿದೆ. ಸುಮಾರು ನೂರ ಅರವತ್ತು ಎಪ್ಪತ್ತು ವರ್ಷಗಳ ಹಿಂದೆ ಕಟ್ಟಿದ ಹೆಂಚಿನ ಮನೆಯದು. ಎರಡು ಅಡಿ ಮಂದವಾಗಿದ್ದ ಮಣ್ಣಿನ ಗೋಡೆಗಳು ಗಟ್ಟಿ ಮುಟ್ಟಾಗಿದ್ದವು. ಸಗಣಿಯಿಂದ ಸಾರಿಸಿದ ನೆಲ ಶುಭ್ರವಾಗಿತ್ತು. ಆ ಮನೆಯಲ್ಲಿ ವಾಸವಾಗಿದ್ದ ಮಲ್ಲಣ್ಣನವರ ಸಂಬಂಧಿಕರು ಅಣ್ಣಯ್ಯ ಜನ್ಮ ತಾಳಿದ ಕೊಠಡಿಯನ್ನು ತೋರಿಸಿದರು.

ಆ ವರ್ಷವೆಲ್ಲ ಅವರು ಬಿ.ಎಂ.ಶ್ರೀ ಯವರ ಹೆಸರಿನಲ್ಲಿ ಹಲವಾರು ಕಾರ್ಯಕ್ರಮಗಳನ್ನು ನಡೆಸಿದ್ದುಂಟು. ೧೯೮೯ ರಲ್ಲಿ ಶ್ರೀಮತಿ ವಿಶಾಲಾಕ್ಷಿ ಸಂಪಾದಿಸಿದ 'ಶ್ರೀ ಉತ್ಸವ' ಎಂಬ ಗ್ರಂಥದಲ್ಲಿ 'ದೊಡ್ಡಪ್ಪ ಬಿ.ಎಂ.ಶ್ರೀ.' ಎನ್ನುವ ನನ್ನ ಲೇಖನ ಪ್ರಕಟವಾಗಿದೆ. ೨೦೦೪ ರಲ್ಲಿ ಪ್ರಕಟವಾದ 'ಲೇಖಾನುಬಂಧ' ಎನ್ನುವ ನನ್ನ ಪ್ರಬಂಧ ಸಂಕಲನವನ್ನು ಅಣ್ಣಯ್ಯನವರಿಗೆ ಅರ್ಪಣೆ ಮಾಡಿದ್ದೇನೆ. ಆ ಸಂಕಲನದಲ್ಲಿ ಅವರನ್ನು ಕುರಿತು ಬರೆದಿರುವ ನನ್ನ ಲೇಖನವಿದೆ.

೨೦೧೨ ರಲ್ಲಿ 'ವಿಶ್ವ ವಿಜ್ಞಾನಿಗಳು' ಎಂಬ ನನ್ನ ಕೃತಿ 'ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಭಾಂಗಣದಲ್ಲಿ ಲೋಕಾರ್ಪಣೆಯಾಯಿತು. ಆ ಸಂದರ್ಭದಲ್ಲಿ "ನನ್ನ ಕೃತಿ ಈ ಸಭಾಂಗಣದಲ್ಲಿ ಲೋಕಾರ್ಪಣೆಯಾಗಿ ತುಂಬ ಸಂತೋಷವಾಗಿದೆ. ಯಾಕೆಂದರೆ ಬಿ.ಎಂ.ಶ್ರೀ ನನ್ನ ದೊಡ್ಡಪ್ಪನವರು ನಾನು ಅವರ ತಮ್ಮನ ಮಗಳು ಎಂದು ಹೇಳಿದಾಗ ಸಭಿಕರು ಸಂಭ್ರಮದಿಂದ ಚಪ್ಪಾಳೆ ಹೊಡೆದರು. ಯಾಕೆಂದರೆ ಈ ವಿಚಾರ ಬಹುಮಂದಿಗೆ ತಿಳಿದಿರಲಿಲ್ಲ.

ಇತ್ತೀಚೆಗೆ 'ಅಣ್ಣಯ್ಯ' ನವರ ಮರಿಮಗಳಾದ ಶ್ರೀಮತಿ ವಿದ್ಯಾ ವಿಕ್ರಮ್ ರವರನ್ನು ಅವರ ಮನೆಯಲ್ಲೆ ಭೇಟಿಯಾದಾಗ ಆಕೆ ಬಿ.ಎಂ.ಶ್ರೀ.ಯವರ ಕೆಲವು ವಸ್ತುಗಳನ್ನು ನವರತ್ನ ಖಚಿತ ಪದಕವನ್ನು ತೋರಿಸಿದರು. ನಾನು ರೋಮಾಂಚನ ಗೊಂಡೆ. ಹೀಗೆ ಹಲವಾರು ಸಂದರ್ಭ, ಸನ್ನಿವೇಶಗಳಲ್ಲಿ ಅಣ್ಣಯ್ಯನವರ ನೆನಪುಗಳು, ಕೆಲವು ಸ್ಪಷ್ಟ, ಮತ್ತೆ ಕೆಲವು ಕತ್ತಲಿನಲ್ಲಿ ಕಾಣುವ ಕಡಲಿನ ಅಲೆಗಳಂತೆ ಅಸ್ಪಷ್ಟ. ಒಟ್ಟಾರೆ ಈ ನೆನಪುಗಳೆಲ್ಲ ಮನಸ್ಸನ್ನು ಮುದಗೊಳಿಸುವ ಮಧುರವಾದ ನೆನಪುಗಳು.



ಭಾಗ-೮

# ಬಿ.ಎಂ.ಶ್ರೀ : ಇತರರ ನೆನಪುಗಳು

## ೧. ಎಂ. ವಿ.ಸೀತಾರಾಮಯ್ಯ:

'ಬಿ.ಎಂ.ಶ್ರೀ.ಯವರೊಂದಿಗೆ ನಾನು ಒಮ್ಮೆ ಬಿಜಾಪುರದಿಂದ ಸೊಲ್ಲಾಪುರಕ್ಕೆ ಪ್ರಯಾಣ ಮಾಡಬೇಕಾಗಿತ್ತು. ನಮ್ಮನ್ನು ಎದಿರುಗೊಳ್ಳುವವರು ಹಾಜರಾಗದೆ ನಾವೇ ಬಸ್ಸಿನಲ್ಲಿ ಪಂಡರಾಪುರಕ್ಕೆ ಹೋಗಿ ನದಿಯಲ್ಲಿ ಸ್ನಾನ ಮಾಡಿ ದೇವಸ್ಥಾನಕ್ಕೆ ಹೋದೆವು. ಬಿ.ಎಂ.ಶ್ರೀ ದೇವರ ಪಾದದ ಮೇಲೆ ಒಂದು ರೂಪಾಯಿ ಇಟ್ಟಾಗ ಪೂಜಾರಿ ಅವರ ತಲೆಯನ್ನು ಬಡಿದು ಬೋರೆ ಬಂತು. 'ಗಾಯಕ್ಕೆ ಹಚ್ಚಲು ಔಷಧಿ ತರುತ್ತೇನೆ ಎಂದು ನಾನು ಹೇಳಿದಾಗ ಅವರು ನಗುತ್ತಾ 'ಬೇಡ, ಪೂಜಾರಿಯೇ ನೇರ ದೇವರ ಸೇವೆ ಮಾಡಿದ್ದಾನೆ' ಎಂದರು. ಅವರ ಚಪ್ಪಲಿ ಕಿತ್ತುಹೋಗಿ ಒರಟು ಕಲ್ಲುಗಳ ಮೇಲೆ ನಡೆದು ಪಾದಗಳಿಗೆ ಗಾಯವಾಯಿತು ಮತ್ತೆ ಪ್ರಯಾಣ ಮಾಡಿ ಉಪನ್ಯಾಸ ನೀಡಿದರು. ಹೀಗೆ ಬಸ್ಸು, ರೈಲು, ಎತ್ತಿನ ಗಾಡಿ, ಕಾಲು ನಡಿಗೆಯಲ್ಲಿ ಪ್ರಯಾಣ ಮಾಡಿ ಕನ್ನಡದ ಪ್ರಚಾರ ಮಾಡಿದ ಕನ್ನಡ ಪ್ರೇಮದ ಪ್ರತೀಕ ಅವರು!

ಬಿ.ಎಂ.ಶ್ರೀಯವರೊಡನೆ ಮಂಗಳೂರಿಗೆ ಹೋಗಿದ್ದಾಗ ಭಾಷಣ ಕಾರರಾಗಿದ್ದ ಅವರನ್ನು ಕಾಲೇಜಿನ ಪ್ರಾಂಶುಪಾಲರಾಗಿದ್ದ ಫಾದರ್ ಪ್ರಾಸ್‌ರ್ಪಿಯೊ ಈ ರೀತಿ ಪರಿಚಯಿಸಿದರು.

"ಇಂದು ಮಂಗಳೂರಿಗೆ ಪುಣ್ಯ ದಿನ. ನಾನು ಇಟಲಿ ದೇಶದ ಪಾದ್ರಿ. ಮದ್ರಾಸಿನ ವಿಶ್ವವಿದ್ಯಾನಿಲಯದಲ್ಲಿ 'Rhetoric' ವಿಷಯ ಕುರಿತು ಬೋಧಿಸಬೇಕಾಗಿತ್ತು. ಅದರ ಬಗ್ಗೆ ನನಗೇನೂ ತಿಳಿಯದಿದ್ದ ಕಾಲದಲ್ಲಿ ಬಿ.ಎಂ.ಶ್ರೀ.ಯವರ ಪುಸ್ತಕ ದೊರಕಿ ಮಹೋಪಕಾರವಾಯಿತು. ಈ ಒಂದು ಕಾರಣದಿಂದ ನಾನೂ ಅವರ ಶಿಷ್ಯ."

"ಬೆಳಗಾಂನಲ್ಲಿ ಬಿ.ಎಂ.ಶ್ರೀ.ಯವರು ಇಂಗ್ಲಿಷ್‌ನಲ್ಲಿ 'ಕವಿ ರಾಷ್ಟ್ರಕನೂ ಹೌದು. ಯುದ್ಧ ಮಾಡುವ ಸೈನಿಕ ಮಾತ್ರ ರಾಷ್ಟ್ರಕನಲ್ಲ' ಎಂಬ ವಿಷಯ ಕುರಿತು ರಾತ್ರಿ ಹನ್ನೆರಡರವರೆಗೆ ಉಪನ್ಯಾಸ ನೀಡಿದರು. ಮಿಲ್ಟನ್ ಕವಿಯ ಉದಾಹರಣೆ ಕೊಟ್ಟರು, ಕೆಲವು ಕವಿತೆಗಳನ್ನು ವಾಚಿಸಿ ಅಂತ್ಯದಲ್ಲಿ 'ಸ್ವದೇಶಿ ಚಳುವಳಿಯಲ್ಲಿ, ಸ್ವಾತಂತ್ರ್ಯ ಚಳುವಳಿಯಲ್ಲಿ ಕವಿಯನ್ನು ಅಲ್ಲಗಳಿಯಬಾರದು ಎಂದರು. ಚಿರಕಾಲ ಕೇಳಿದವರ ಮನದಲ್ಲಿ ಉಳಿಯುವಂಥ ಆ ಭಾಷಣ ಮುಗಿದ ಮೇಲೆ ಅನೇಕರು ಅವರ ಕೈ ಕುಲುಕಿದರು, ಕೃತಜ್ಞತೆ ಸೂಚಿಸಿದರು, ಅಪ್ಪಿಕೊಂಡರು! ಅದು ನಿಜಕ್ಕೂ ನನಗೆ ಮರೆಯಲಾಗದ ಅನುಭವ. ನೆನಪಿಗೆ ಬಂದರೂ ರೋಮಾಂಚನವಾಗುತ್ತದೆ."

**೨. ಪ್ರೊ. ಎಸ್.ವಿ.ರಂಗಣ್ಣ**

ಬಿ.ಎಂ.ಶ್ರೀ ಪಾಠ ಮಾಡುವಾಗ ತರಗತಿಯಲ್ಲಿ ಹೇಳಿದ ಮಾತುಗಳಿದು;

"ವಿಮರ್ಶಕರು ಹೇಳಿದ್ದನ್ನೆಲ್ಲಾ ಕೇಳಬೇಕು, ಅದೆಲ್ಲವನ್ನೂ ಅರಗಿಸಿಕೊಳ್ಳ ಬೇಕು. ಒಳ್ಳೆಯ ಅಂಶವೇನಾದರೂ ಇದ್ದರೆ ತೆಗೆದುಕೊಳ್ಳಬೇಕು. ಉಳಿದಿದ್ದನ್ನು ಬಿಟ್ಟು ಬಿಡಬೇಕು" ಪ್ರತಿಯೊಬ್ಬರಿಗೂ ಸ್ವಂತ ಬುದ್ಧಿ, ಸ್ವಂತ ದೃಷ್ಟಿಯಿರಬೇಕೆಂದು ಅವರು ಹೇಳಿದ ಮಾತು ನನಗೆ ತುಂಬ ಮೆಚ್ಚುಗೆಯಾಯಿತು.

ಬಿ.ಎಂ.ಶ್ರೀ ಸೆಂಟ್ರಲ್ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದಾಗ ನಾನೂ ಅವರ ಜೊತೆಯಲ್ಲಿ ಕೆಲಸ ಮಾಡಬೇಕಾಗಿತ್ತು. ಅನಾರೋಗ್ಯವಿದ್ದರೂ ಕರೆದ ಕಡೆಗಳಿಗೆಲ್ಲ ಪ್ರಯಾಣ ಮಾಡಿ ಭಾಷಣ ಮಾಡುತ್ತಿದ್ದರು. ಒಂದು ದಿನ ಕಿಕ್ಕಿರಿದ ಮೂರನೆಯ ತರಗತಿಯ ರೈಲುಗಾಡಿಯಲ್ಲಿ ಅವರನ್ನು ನೋಡಿ ಹಿಂಸೆಯಾಯಿತು. 'ಮೇಲಿನ ತರಗತಿ'ಯಲ್ಲಿ ಕುಳಿತುಕೊಳ್ಳದೆ ಹೀಗೇಕೆ ಮಾಡಿದಿರಿ? ಎಂದು ಪ್ರಶ್ನಿಸಿದೆ.

ಅಯ್ಯೋ ನನ್ನನ್ನು ಕರೆಸಿಕೊಳ್ಳುತ್ತಿರುವವರು ಹೆಚ್ಚು ಹಣ ಕೊಡಲಾರರು ಸ್ವಂತ ಹಣ ಖರ್ಚು ಮಾಡಿ ನಾನು ಬಳಲಿದ್ದೇನೆ, ಆದರೂ ಕರೆದರೆ ಹೋಗದೆ ಇರಲಾರೆ' ಎಂದರು.

**೩. ಎ.ಎನ್. ಮೂರ್ತಿರಾಯರು**

"ಮೈಸೂರಿನ ಮಹಾರಾಜ ಕಾಲೇಜಿನ ವೇದಿಕೆಯ ಮೇಲೆ ಬಿ.ಎಂ.ಶ್ರೀ. ಯವರ ನೇತೃತ್ವದಲ್ಲಿ 'ಗದಾಯುದ್ಧ ನಾಟಕಂ' ಪ್ರದರ್ಶನವಾಗುತ್ತಿತ್ತು. ಅಧ್ಯಾಪಕರುಗಳು, ವಿದ್ಯಾರ್ಥಿಗಳಲ್ಲದೆ ಸಾರ್ವಜನಿಕರು ಕಿಕ್ಕಿರಿದು ನಾಟಕವನ್ನು

ವೀಕ್ಷಿಸುತ್ತಿದ್ದರು. ಆಗೊಂದು ಅಚಾತುರ್ಯ ಸಂಭವಿಸಿತು. ಭೀಮನ ಪಾತ್ರದಲ್ಲಿದ್ದ ಎನ್.ಎನ್.ಶಾಸ್ತ್ರಿಗಳು ದುರ್ಯೋದನನ ಪಾತ್ರದಲ್ಲಿದ್ದ ಅಮೀರನ ಜೊತೆ ಗದೆಯೊಂದಿಗೆ ಸೆಣಸಾಡುತ್ತಿದ್ದಾಗ ದುರ್ಯೋದನನ ಗದೆ ಮುರಿದು ಎರಡು ಪಾಲಾಯಿತು. ಕೂಡಲೆ ಶಾಸ್ತ್ರಿಗಳು ತಮ್ಮ ಗದೆಯನ್ನು ಬಿಸಾಡಿ 'ಗದೆ ಮುರಿದರೇನಂತೆ ಕೈಗಳಿಂದ ಯುದ್ಧ ಮಾಡೋಣ ಎಂದು ಹೇಳಿ ಆ ಸಂಕಷ್ಟ ಪರಿಸ್ಥಿತಿಯನ್ನು ಚಮತ್ಕಾರದಿಂದ ಎದುರಿಸಿದರು. ಆ ದೃಶ್ಯ ಮುಗಿದ ಕೂಡಲೆ ಬಿ.ಎಂ.ಶ್ರೀ. ಶಾಸ್ತ್ರಿಯವರನ್ನು ಸಂತೋಷದಿಂದ ಅಪ್ಪಿಕೊಂಡರು.

**೪. ಪ್ರೊ. ಸ.ಸ.ಮಾಳವಾಡ**

ಧಾರವಾಡದ ಕಾರ್ಯಕ್ರಮದಲ್ಲಿ ಭಾಗವಹಿಸಲು ಬಿ.ಎಂ.ಶ್ರೀ. ಬಂದಿದ್ದಾಗ ನಮ್ಮ ಮನೆಯಲ್ಲಿ ತಂಗಿದ್ದರು. ಸಭೆಯನ್ನುದ್ದೇಶಿಸಿ ಭಾಷಣ ಮಾಡುವಾಗ ಪ್ರಾರಂಭದಲ್ಲೆ 'ಸಭೆಗೆ ನಾನು ತಡವಾಗಿ ಬಂದದ್ದಕ್ಕೆ ದಯವಿಟ್ಟು ಕ್ಷಮಿಸಿ ಮಾಳವಾಡರ ಮನೆಯಲ್ಲಿ ತಿಂಡಿ ಜಾಸ್ತಿ ಕೊಟ್ಟರು. ತಿನ್ನುತ್ತಾ ಕುಳಿತುಬಿಟ್ಟೆ. ಅದಕ್ಕೆ ಬರುವುದು ತಡವಾಯಿತು'. ಎಂದು ಹೇಳಿ ಸಭಿಕರನ್ನು ನಗೆಗಡಲಿನಲ್ಲಿ ತೇಲಿಸಿದರು.

**೫. ಡಾ. ಕೆ.ವಿ. ಪುಟ್ಟಪ್ಪ**

ಕಲ್ಬುರ್ಗಿಯ ಸಾಹಿತ್ಯ ಸಮ್ಮೇಳನದಲ್ಲಿ ಸಂಜೆ ಬಿ.ಎಂ.ಶ್ರೀ ಯವರ 'ಗದಾಯುದ್ಧ ನಾಟಕಂ' ಮತ್ತು 'ಯಮನ ಸೋಲು' ನಾಟಕಗಳ ಪ್ರದರ್ಶನವಿತ್ತು. ನಂತರ ಬಿ.ಎಂ.ಶ್ರೀ. ತಮಗೆ ಹಾಕಿದ್ದ ಹಾರವನ್ನು ತೆಗೆದು ನನ್ನ ಕೊರಳಿಗೆ ಹಾಕಿ 'ಇದು ಇವರಿಗೆ ಹೆಚ್ಚಾಗಿ ಸಲ್ಲತಕ್ಕದ್ದು' ಎಂದರು. ಈ ರೀತಿ ಅವರು ಅನೇಕ ಸಂದರ್ಭಗಳಲ್ಲಿ ಕಿರಿಯರನ್ನು, ಶಿಷ್ಯರನ್ನು ತಮ್ಮ ಸಮಾನರೆಂದು ಕಂಡಿದ್ದುಂಟು. ಕನ್ನಡ ನಾಡು, ನುಡಿ, ಸಾಹಿತ್ಯ ಇರುವವರೆಗೆ 'ಶ್ರೀ'ಯವರನ್ನು ನೆನೆಯುತ್ತಿರುತ್ತದೆ."

**೬. 'ವಾಣಿ' (ಬಿ.ಎನ್ ಸುಬ್ಬಮ್ಮ)**

"ಬಿ.ಎಂ.ಶ್ರೀ., ನಾನು ಸಮೀಪ ಬಂಧುಗಳು. ಇಬ್ಬರೂ ಬಾಲ್ಯವನ್ನು ಶ್ರೀರಂಗಪಟ್ಟಣದಲ್ಲಿ ಕಳೆದವರು. ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದ್ದ ಭಾಸ್ಕರ ರಾಯರ ಸ್ಪರ್ಧೆಯಲ್ಲಿ 'ಮಿಂಚು' ಎಂಬ ನನ್ನ ಕಥೆಗೆ ಮೊದಲನೆಯ ಬಹುಮಾನ ಬಂದಿತ್ತು. ಆಗ ಪರಿಷತ್ತಿನ ಅಧ್ಯಕ್ಷರಾಗಿದ್ದ, ಬಿ.ಎಂ.ಶ್ರೀ. ನನಗೆ ಬಹುಮಾನ ನೀಡುವಾಗ ಬೆನ್ನು ತಟ್ಟಿ ಅಭಿನಂದನೆಗಳು ಮಹಿಳೆಯರೂ ಸಾಹಿತ್ಯ

ರಚನೆಯಲ್ಲಿ ಆಸಕ್ತಿ ವಹಿಸಬೇಕು ಎಂದರು. ಆ ನೆನಪು ನನ್ನಲ್ಲಿ ಹಸುರಾಗಿಯೇ ಉಳಿದಿದೆ."

**೭. ಎನ್.ಡಿ.ಎನ್.ರಾವ್ (ಬಿ.ಎಂ.ಶ್ರೀ. ಕಿರಿಯ ಅಳಿಯ)**

ಬಿ.ಎಂ.ಶ್ರೀ. Tamil lovers conference ನಲ್ಲಿ ಭಾಗವಹಿಸಲು ಮದ್ರಾಸಿಗೆ ಹೋಗಿದ್ದ ಸಂದರ್ಭದಲ್ಲಿ ಬಿದ್ದು ಬಲಗೈ ಮುರಿದುಕೊಂಡರು. ಊರಿಗೆ ಹಿಂತಿರುಗಿದ ಮಾರನೆಯ ದಿನವೇ ಕಾಲೇಜಿಗೆ ಹೋಗಿ ಪಾಠ ಮಾಡಿದರು. ಅವರುಟ್ಟಿದ್ದ ಅಡ್ಡ ಪಂಚೆ, ತೊಟ್ಟಿದ್ದ ಅರೆತೋಳಿನ ಷರಟು, ತಲೆಯ ಮೇಲಿದ್ದ ಟೋಪಿ ನೋಡಿ ಎಲ್ಲರೂ ಚಕಿತರಾದರು. ಆ ವೇಷದಲ್ಲಿ ಅವರೆಂದೂ ಕಾಲೇಜಿಗೆ ಹೋದವರಲ್ಲ. ಸಂಜೆ ಮನೆಯಲ್ಲಿ ಕುಳಿತು ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ತಿದ್ದುತ್ತಿದ್ದರು. ಅಳಿಯ ಗುಂಡಪ್ಪನಿಂದ ಉತ್ತರಗಳನ್ನು ಓದಿಸಿ ಒಂದೊಂದು ಉತ್ತರಕ್ಕೂ ಎಷ್ಟು ಅಂಕ ಕೊಡಬೇಕೆಂದು ನಿರ್ಧರಿಸಿ ಎಡಗೈಲಿ ಹಾಕುತ್ತಿದ್ದರು. ಈ ಪ್ರಕರಣವಾದ ಮೆಲೆ ಅವರು ಎಡಗೈಯಿಂದಲೂ ಚೆನ್ನಾಗಿ ಬರೆಯುವುದನ್ನು ಕಲಿತಿದ್ದರು. ಕರ್ತವ್ಯ ನಿಷ್ಠರಾಗಿದ್ದ ಅವರು ವಿದ್ಯಾರ್ಥಿಗಳಿಗೆ ಪಾಠ ತಪ್ಪಿಸುತ್ತಿರಲಿಲ್ಲ.

ಬೆಂಗಳೂರಿನ ಕಲಾಸಿಪಾಳ್ಯದಲ್ಲಿ ನಾಟಕ ಶಿರೋಮಣಿ ವರದಾಚಾರ್ ಅವರ ನಾಟಕ ಶಾಲೆಯಲ್ಲಿ ಕೈಲಾಸಂ ಅವರ ಕೆಲವು ನಾಟಕಗಳ ಆಶುಭಾಷಣ ಏರ್ಪಾಡಾಗಿತ್ತು. ಅಂದಿನ ಕಾರ್ಯಕ್ರಮದ ಅಧ್ಯಕ್ಷರು ಬಿ.ಎಂ.ಶ್ರೀ. ಕೈಲಾಸಂ ಅವರು ಈ ದಿನ ತಿಪ್ಪಾರಳ್ಳಿ ಬಲು ದೂರ ಎನ್ನುವ ಪದ್ಯವನ್ನು ಇಂಗ್ಲಿಷ್ ಮತ್ತು ಕನ್ನಡ ಭಾಷೆಯಲ್ಲಿ ನನ್ನ ಬಾಯಿಂದಲೆ 'ಬಿ.ಎಂ.ಶ್ರೀ. ಕೇಳಬೇಕಂತೆ' ಎಂದು ಹೇಳಿ ಹಾಡಿ ಸ್ರ್ವರನ್ನು ರಂಜಿಸಿದರು."

**೮. ಜಯಲಕ್ಷ್ಮಿ ಶ್ರೀನಿವಾಸನ್ (ಲೇಖಕಿ)**

೧೯೩೮ ರಲ್ಲಿ ನಮ್ಮ ತಂದೆ ನನ್ನನ್ನು ಬಿ.ಎಂ.ಶ್ರೀ.ಯವರಿಗೆ ಪರಿಚಯ ಮಾಡಿಕೊಟ್ಟಾಗ ಅವರು ಸಂತೋಷದಿಂದ 'ಇವಳಾ ನಿಮ್ಮ ಮಗಳು ಆಗಾಗ ಕಥೆಗಳನ್ನೂ, ಲೇಖನಗಳನ್ನೂ, ಬರೆದು ಪತ್ರಿಕೆಗಳಿಗೆ ಕಳುಹಿಸುತ್ತಾಳಲ್ಲವೆ? ನಾನೂ ಓದಿದ್ದೇನೆ. ಸರಳ, ಸುಲಭ ಶೈಲಿಯ ಬರಹಗಳು ನಮ್ಮ ಜನತೆಗೆ ಇನ್ನೂ ಹೆಚ್ಚು ಹೆಚ್ಚಾಗಿ ದೊರಕಬೇಕು. ಕ್ಲಿಷ್ಟ ಸಾಹಿತ್ಯ ಭಾಷಾ ಪಂಡಿತರಿಗೆ ಮಾತ್ರ ಮೀಸಲು' ಎಂದು ಹೇಳಿ ನನ್ನನ್ನು ಆಶೀರ್ವದಿಸಿದರು.

**೯. ವಿಶಾಲಾಕ್ಷಿ (ಬಿ.ಎಂ.ಶ್ರೀ.ಯವರ ಮೊಮ್ಮಗಳು):**

"ಐದನೆಯ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡು ತಾತ ಅಣ್ಣಯ್ಯನ ಮನೆಯಲ್ಲೆ ಬೆಳೆದೆ. ಅವರ ಮಾರ್ಗದರ್ಶನದಲ್ಲಿ ವಿದ್ಯಾಭ್ಯಾಸ ಮಾಡಿ ಇಂಗ್ಲಿಷ್

ಸಾಹಿತ್ಯದಲ್ಲಿ ಒಲವು ಬೆಳೆಸಿಕೊಂಡೆ. ನನಗಾಗ ಐದು ವರ್ಷ ಅಣ್ಣಯ್ಯನನ್ನು ಕೇಳಿದೆ

"ಅಣ್ಣಯ್ಯ, ಹುಣಸೆಮರದ ಮೇಲೆ ದೆವ್ವ ಕುಳಿತಿರುತ್ತದೆಯಂತೆ ಹೌದಾ?"

"ಹಾಗಂತ ನಿನಗೆ ಹೇಳಿದವರು ಯಾರು?"

"ಮಾದ"

ಮಾದನಿಗೆ ಮಾರನೆಯ ದಿನವೇ ಅಣ್ಣಯ್ಯನವರಿಂದ ಮಕ್ಕಳನ್ನು ನೋಡಿಕೊಳ್ಳುವ ಬಗ್ಗೆ ದೊಡ್ಡ ಭಾಷಣವಾಯಿತು. ಇಂಗ್ಲಿಷ್ ಆನರ್ಸ್ ಓದುತ್ತಿದ್ದಾಗ ನನಗೆ ಬೇಗ ಓದು ಮುಗಿಸು. ಷೇಕ್ಸ್‌ಪಿಯರ್‌ನನ್ನು ಕನ್ನಡಕ್ಕೆ ಭಟ್ಟಿಯಿಳಿಸುವ ಕೆಲಸದಲ್ಲಿ ನನಗೆ ನೆರವಾಗು. ಆ ಕೆಲಸಕ್ಕೆ ನಿನಗಾಗಿ ಕಾಯುತ್ತಿರುವೆನು" ಎಂದು ಹೇಳಿದರು. ಆದರೆ ಆ ಸೊಗಸಿನ ದಿನ ಬರಲೇ ಇಲ್ಲ. ನಾನು ಎಂ.ಎ.ಪದವಿ ಪಡೆಯುವುದಕ್ಕೆ ಮೊದಲೆ ಅವರು ನಮ್ಮನ್ನಗಲಿದರು. ಈಗ ತಾಯಿಯೂ ಇಲ್ಲ, ತಾತನೂ ಇಲ್ಲ. ಆದರೆ ಅವರೆಲ್ಲ ಬಿಟ್ಟು ಹೋದ ನೆನಪುಗಳು ಮಾತ್ರ ನನ್ನಲ್ಲುಳಿದಿವೆ."

**೧೦. ರಾಜಲಕ್ಷ್ಮಿ ಎನ್.ರಾವ್ (ಬಿ.ಎಂ.ಶ್ರೀ. ಮೊಮ್ಮಗಳು) :**

"ನನಗಾಗ ಹನ್ನೊಂದು ವರ್ಷ. 'ಶ್ರೀ' ಎನ್ನುವ ಹೆಮ್ಮರದ ಆಶ್ರಯದಲ್ಲಿ ಸುಖವಾಗಿ ಬೆಳೆದೆ. ಮನೆಯಲ್ಲಿ ಸದಾ ಶಿಸ್ತು, ಶಾಂತಿ, ಗಾಂಭೀರ್ಯ, ಉತ್ಕಟವಾದ ಸಾಹಿತ್ಯಾರಾಧನೆ, ಅಖಂಡ ಕರ್ನಾಟಕದ ಕನಸು. ಅದಕ್ಕಾಗಿ ಬಿಡುವಿಲ್ಲದ ತೀವ್ರ ರೀತಿಯಲ್ಲಿ ನಡೆಸುತ್ತಿದ್ದ ಶ್ರಮ, ಸಾಹಿತ್ಯ, ಸಂಸ್ಕೃತಿ, ಸಮಾಜದ ಗಣ್ಯ ವ್ಯಕ್ತಿಗಳ ಸಮ್ಮಿಲನ, ಸಮಾಲೋಚನೆ ಅರ್ಥವಿಲ್ಲದ ಅಥವಾ ಪ್ರಯೋಜನ ಕಳೆದುಕೊಂಡ ರೂಢಿಗಳನ್ನು ಸಮಾಜದ ಹೆದರಿಕೆಗೆ ಮುಂದುವರಿಸದೆ, ಅವುಗಳ ಭಾರವನ್ನು ಧೈರ್ಯದಿಂದ ಕಳಚಿಕೊಂಡು ಪೋಷಣೆಯಲ್ಲಿದ್ದ ಮಕ್ಕಳನ್ನು ಅತ್ಯಂತ ಜಾಗರೂಕತೆಯಿಂದ, ವಾತ್ಸಲ್ಯದಿಂದ ಕಾಪಾಡುತ್ತಾ, ಅವರಲ್ಲಿ ಸುಪ್ತವಾಗಿರಬಹುದಾದ ಸದ್ಗುಣಗಳು ಅರಳುವಂತೆ ಅವಕಾಶಗಳನ್ನು ಕಲ್ಪಿಸಿ ಕೊಡುತ್ತ, ಅರಳುವ ಸೂಚನೆಗಳು ಕಂಡು ಬಂದರೆ ಅದಕ್ಕೆ ಪ್ರೋತ್ಸಾಹವನ್ನೆರೆಯುತ್ತ ಅನಾವಶ್ಯಕವಾದ ವಿಚಾರಗಳನ್ನು ಖಂಡಿಸುತ್ತ ಮೂರು ತಲೆಮಾರಿನವರಿಂದಲೂ 'ಅಣ್ಣಯ್ಯ' ಎನಿಸಿಕೊಳ್ಳುತ್ತಿದ್ದ ಹಾಗೆಯೇ ಎಲ್ಲರಿಗೂ ಹಿರಿಯಣ್ಣನೇ ಆಗಿದ್ದ ಮಹಾನ್‌ವ್ಯಕ್ತಿ ಅಜ್ಜ ಬಿ.ಎಂ.ಶ್ರೀ. ತಾವು ಕಷ್ಟಪಟ್ಟು ಸಂಪಾದಿಸಿದ್ದ ಅಮೂಲ್ಯವಾದ ಜ್ಞಾನವನ್ನು ಕರುಣೆಯಿಂದ ಇತರರಿಗೂ ಹಂಚಿದ ಮಹಾತ್ಮ ತಾತನವರನ್ನು ಅಪಾರ ಕೃತಜ್ಞತೆಯಿಂದ ಸ್ಮರಿಸಿ ವಂದಿಸುತ್ತೇನೆ.

**೧೧. ಶಾಂತ ಶ್ರೀಕಂಠಯ್ಯ: (ಬಿ.ಎಂ.ಶ್ರೀ.ಯವರ ಮಗಳು ಶಾರದಮ್ಮನ ಸೊಸೆ):**

"ಒಂದು ದಿನ 'ಕನ್ನಡ ಬಾವುಟ' ಕವನ ಸಂಕಲನವನ್ನು ಓದುತ್ತಿದ್ದಾಗ ಹಿಂದೆಂದೂ ನೋಡದಿದ್ದ ಅಕ್ಷರಗಳನ್ನು ಕಂಡು ಆಶ್ಚರ್ಯವಾಯಿತು 'ಅಣ್ಣಯ್ಯ, ಈ ಪುಸ್ತಕದಲ್ಲಿ ಯಾವುದೋ ಹೊಸ ಅಕ್ಷರಗಳಿವೆ' ಎಂದು ಪ್ರಶ್ನಿಸಿದಾಗ ಅವರು 'ಇದು ಹಳೆಗನ್ನಡದ ಅಕ್ಷರಗಳು, ಈಗ ಯಾರೂ ಉಪಯೋಗಿಸುವುದಿಲ್ಲ, ಆದ್ದರಿಂದ ನಿನಗೆ ಗೊತ್ತಿಲ್ಲ' ಎಂದು ಹೇಳಿ ಆ ಅಕ್ಷರಗಳ ಉಚ್ಚಾರಣೆಯನ್ನು ನನಗೆ ಪರಿಚಯ ಮಾಡಿಸಿದರು.

'ನನ್ನ ಬಳಿ ಒಂದು ರೂಪಾಯಿ ಇದೆ. ಅದನ್ನು ತೆಗೆದುಕೊಂಡು ಈ ಪುಸ್ತಕ ಕೊಡಿ, ಓದುತ್ತೇನೆ' ಎಂದು ಹೇಳಿದೆ. ಅದಕ್ಕವರು ಈ ಪುಸ್ತಕದ ಬೆಲೆ ಐದು ರೂಪಾಯಿ. ನಿನ್ನ ಬಳಿಯಲ್ಲಿರುವ ಒಂದು ರೂಪಾಯಿಗೆ ನಿನಗೇನು ಬೇಕೊ ತೆಗೆದುಕೊ ಎಂದು ಹೇಳಿ 'ಕನ್ನಡ ಬಾವುಟ' ಪುಸ್ತಕದ ಒಂದು ಪ್ರತಿಯ ಒಳಪುಟದಲ್ಲಿ 'ಚಿ.ಸೌ.ಶಾಂತಾಗೆ ಪ್ರೀತಿಯಿಂದ ಶ್ರೀ' ಎಂದು ಬರೆದು ತಾರೀಖು ಹಾಕಿಕೊಟ್ಟರು."

**೧೨. ಬಿ.ಎಂ.ಶಿವರಾಮಯ್ಯ : (ಬಿ.ಎಂ.ಶ್ರೀ. ಕಿರಿಯ ಸಹೋದರ):-**

"ಭಾಷಾ ಪ್ರೇಮದ ವಿಚಾರದಲ್ಲಿ ಒಬ್ಬ ಸಾಹಿತಿಯೊಡನೆ ನಾನು ವಾಗ್ವಾದ ಮಾಡಿದಾಗ ಅಣ್ಣಯ್ಯ ಹೇಳಿದ ಬುದ್ಧಿವಾದದ ಮಾತಿದು

"ಜಗಳಗಂಟಿಗರೊಂದಿಗೆ ವಾಗ್ವಾದ ಬೇಡ" ಎಂದು ಅಣ್ಣಯ್ಯ ನನಗೆ ಒಮ್ಮೆ ಹೇಳಿದಾಗ ಆ ಮಾತು ಸಾಕ್ರೆಟಿಸ್‌ನನ್ನು ನೆನಪಿಸುವಂತಿತ್ತು. ಜಗಳಗಂಟಿ ಹೆಂಡತಿ ಗುಡುಗುಡಿಸಿ ಈಚೆಗೆ ಬಂದು ಸಾಕ್ರೆಟಿಸ್‌ನ ಮೇಲೆ ಕೊಳೆ ನೀರೆರೆಚಿದಾಗ ಆತ 'ಸ್ವಚ್ಛ ಗುಡುಗಿದ ಮೇಲೆ ಮಳೆ ಬಂದದ್ದೇನಾಶ್ಚರ್ಯ' ಎಂದುತ್ತರಿಸಿದನಂತೆ!

**೧೩. ಪು.ತಿ.ನರಸಿಂಹಾಚಾರ್ಯ**

"ಬಿ.ಎ. ತರಗತಿಯಲ್ಲಿ ಓದುತ್ತಿದ್ದಾಗ ಬಿ.ಎಂ.ಶ್ರೀ. ನನಗೆ ಇಂಗ್ಲಿಷ್ ಕಾವ್ಯದ ಬೋಧಕರಾಗಿದ್ದರು. ಅವರ ಬೋಧನೆಯಿಂದ ವರ್ಡ್ಸ್‌ವರ್ತ್ ಮತ್ತು ಬ್ರೌನಿಂಗ್ ಕವಿಗಳ ಕಾವ್ಯ ಸೌಂದರ್ಯವನ್ನು ಅರ್ಥ ಮಾಡಿಕೊಂಡೆ. ಕನ್ನಡ ಛಂದಸ್ಸಿನ ಬಗ್ಗೆ ಅವರು ಮಾಡಿದ ಮೂರು ಅಮೋಘ ಪ್ರವಚನಗಳನ್ನು ಕೇಳಿ ವಿಸ್ಮಿತನಾದುದು ಇನ್ನೂ ನೆನಪಿನಲ್ಲಿದೆ. 'ಕಿರಿಯ ಕಾಣಿಕೆ' ಎಂಬ ಪದ್ಯ ಸಂಕಲನವನ್ನು ಅವರಿಗೆ ಅರ್ಪಿಸಿದ ತರುಣ ಕವಿಗಳಲ್ಲಿ ನಾನೂ ಒಬ್ಬನಾಗಿದ್ದೆ. ಅವರ ಮುಖ್ಯವಾದ ಕೊಡಿಗೆ ಕನ್ನಡ ಕಾವ್ಯಕ್ಕೆ ಅವರು ತಂದ ಛಂದೋ

ವೈವಿಧ್ಯ. ತೀ.ನಂ.ಶ್ರೀ ಯವರ ಜೊತೆಯಲ್ಲಿ ಅವರ ಮನೆಗೆ ಊಟಕ್ಕೆ ಹೋಗಿದ್ದೆ, ಸೊಗಸಾದ ಅಡಿಗೆ, ಸರಸವಾದ ಮಾತುಕತೆ, ನಂತರ ನಮಗೆ ಕಾಬೂಲು ದಾಳಿಂಬೆಯನ್ನು ಬಿಡಿಸಿ ಬೆಳ್ಳಿ ಬಟ್ಟಲಲ್ಲಿ ತುಂಬಿಕೊಟ್ಟಿದ್ದು ನೆನಪಿದೆ. ಮಗುವಿನಂಥ ಮನಸ್ಸು, ಉದಾರವಾದ ಹೃದಯ ಅವರದು".

**೧೪. ಹೆಚ್.ಎಂ. ಶಂಕರನಾರಾಯಣರಾವ್ (ಶಿಷ್ಯರು) :**

"ಇಂಟರ್ ಮೀಡಿಯಟ್ ಪರೀಕ್ಷೆಯಲ್ಲಿ ಅನುತ್ತೀರ್ಣವಾದವರಿಗೆ ಕನ್ನಡ ಮತ್ತು ಇಂಗ್ಲಿಷ್‌ಗಳಿಗೆ ನ್ಯಾಷನಲ್ ಹೈಸ್ಕೂಲಿನಲ್ಲಿ ಬೆಳಗಿನ ವೇಳೆ ಅಧ್ಯಾಪಕರು ಪಾಠ ಮಾಡುತ್ತಿದ್ದರು. 'ಶ್ರೀ' ಯವರ ಅಳಿಯ ಗುಂಡಪ್ಪ ತೀರಿಕೊಂಡು ಪರೀಕ್ಷೆ ಸಮೀಪಿಸುತ್ತಿದ್ದ ವಿದ್ಯಾರ್ಥಿಗಳ ಮೇಲಿನ ಕರುಣೆಯಿಂದ ಬಿ.ಎಂ.ಶ್ರೀ. ಒಂದು ಭಾನುವಾರ ೨ ರಿಂದ ೮ ರವರೆಗೆ ಪಾಠ ಮಾಡಿದರು. ಅಂದು ಅವರು ಮಾಡಿದ ಪಾಠ ನಲವತ್ತು ವರ್ಷಗಳ ನಂತರವೂ ನನ್ನ ನೆನಪಿನಲ್ಲಿದೆ."

(ಲೇಖಕರು ೧೯೮೬ ರಲ್ಲಿ ಪ್ರಕಟವಾದ ಲೇಖನವೊಂದರಲ್ಲಿ ಬರೆದಿದ್ದಾರೆ).

**೧೫. ಡಾ.ರಾಜೇಶ್ವರಿ ಚಟರ್ಜಿ: (ಬಿ.ಎಂ.ಶ್ರೀ. ತಮ್ಮನ ಮಗಳು) :**

"೧೯೪೧ ರಲ್ಲಿ ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್.ಸಿ. ವಿದ್ಯಾರ್ಥಿಯಾಗಿದ್ದಾಗ ಅಣ್ಣಯ್ಯ ನಮ್ಮ ತರಗತಿಗೆ 'Merchant of Venice' ನಾಟಕ ಬೋಧಿಸುತ್ತಿದ್ದರು. ನಾಟಕದಲ್ಲಿ ಬರುವ ಪಾತ್ರಗಳನ್ನೆಲ್ಲ ನಟಿಸಿ ತೋರಿಸುತ್ತಿದ್ದರು. ನಾವೆಲ್ಲ ವಿಸ್ಮಯದಿಂದ ನೋಡುತ್ತಿದ್ದೆವು. ಅದನ್ನು ನಾನು ಮರೆಯುವಂತಿಲ್ಲ. ಆಗಾಗ ಮೆಲುಕು ಹಾಕುತ್ತಿರುತ್ತೇನೆ."



**ಭಾಗ-೯**

# ಬಿ. ಎಂ. ಶ್ರೀ : ನುಡಿಮುತ್ತುಗಳು

“ಕನ್ನಡಿಗರೆ ಏಳಿ, ಎಚ್ಚರಗೊಳ್ಳಿ, ಆರಂಭ ಮಾಡಿ
ನಾವು ಕನ್ನಡಿಗರು, ಇಂದು ಸತ್ತವರನ್ನು ಎಬ್ಬಿಸುವುದೇ ಅಲ್ಲ
ಬದುಕಿರುವವರನ್ನೂ ಎಚ್ಚರಗೊಳಿಸುವುದಕ್ಕೆ ಹೊರಟಿರುವೆವು”

“ಕನ್ನಡ ಮಾತೆಯ ಮೂಲಕ ಭಾರತ ಮಾತೆಯನ್ನು ಸೇವಿಸೋಣ
ಕನ್ನಡ ಮಾತೆ ಉದ್ಧಾರವಾದರೆ ಭರತಮಾತೆಯೂ ವೃದ್ಧಿಯಾಗುತ್ತಾಳೆ.

“ಕನ್ನಡಿಗರುಸಿರಾಗಿ ಕನ್ನಡಂ ಬಾಳ್ಗೆ”

“ಕನ್ನಡಿಗರಾದ ನಾವು ಯಾರಿಗೂ ತಲೆತಗ್ಗಿಸಬೇಕಾಗಿಲ್ಲ; ತಲೆಯೆತ್ತಿ ನಡೆಯಬೇಕಾಗಿದೆ”.

“ಕನ್ನಡದ ಕಾವಲು ನಾಯಿ ನಾನು, ಅದಕ್ಕೆ ಕಾವು ತಟ್ಟುವುದಾದರೆ ಬಗುಳುವುದುಂಟು, ಕಚ್ಚುವ ನಾಯಲ್ಲ.”

“ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ, ಪೋಷಕ, ಗುರು”.

“ಕನ್ನಡ ತಾಯಿ ಇವತ್ತಿನವಳಲ್ಲ. ಅವಳು ಕೈಯೆತ್ತಿದರೆ ೫೦೦೦ ವರ್ಷಗಳ ಹಿಂದೆ ಚಾಚಬಹುದು. ಸಂಸ್ಕೃತಕ್ಕೂ ಹಿರಿಯರಾದ ಪಾರಂಪರ್ಯವುಳ್ಳ ಆ ತಾಯಿಯಲ್ಲಿ ನೀವು ಅಭಿಮಾನ ತಾಳಬೇಕು.”

“ನಾವೆಲ್ಲರೂ ಸಿರಿಗನ್ನಡಂ ಗೆಲ್ಗೆ! ಸಿರಿಗನ್ನಡಂ ಗೆಲ್ಗೆ! ಸಿರಿಗನ್ನಡಂ ಗೆಲ್ಗೆ! ಎಂಬುದನ್ನು ಜಪಿಸಬೇಕು”

“ಕನ್ನಡ ನುಡಿ ನಮ್ಮ ಹೆಣ್ಣು, ನಮ್ಮ ತೋಟದಿನಿಯ ಹೆಣ್ಣು
ಬಳಿಕ ಬೇರೆ ಬೆಳೆದ ಹೆಣ್ಣು ಒಳಗೆ ಸುಳಿದಳು.

ಹೊಸದು ರಸದ ಬಳಿ ಹೆಣ್ಣು ಬಳಿಗೆ ಸುಳಿದಳು
ಹೀಗೆ ನನಗೆ ಹಬ್ಬವಾಗಿ ಇನಿಯರಿಬ್ಬರನ್ನು ತೂಗಿ
ಅವಳ ಉಡುಪು ಇವಳಿಗಿಟ್ಟು ನೋಡಬಯಸಿದೆ.
ಇವಳ ತೊಡಿಗೆ ಅವಳಿಗಿಟ್ಟು ಹಾಡಬಯಸಿದೆ."

"ಕನ್ನಡ ತಾಯಿಗಾಗಿ ಭಿಕ್ಷೆ ಬೇಡುವ ದಾಸಯ್ಯ ನಾನು
ಸಿರಿಗನ್ನಡಂ ಗೆಲ್ಗೆ! ಕನ್ನಡ ತಾಯ್ ಬಾಳ್ಗೆ."

"ಕನ್ನಡ ನಾಡಿಗೆ ಕನ್ನಡವೇ ಗತಿ, ಅನ್ಯಥಾ ಶರಣಂ ನಾಸ್ತಿ
ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ, ಕನ್ನಡ."

"ಕನ್ನಡವನ್ನು ನಂಬಿ, ಕನ್ನಡವನ್ನು ಕೈ ಹಿಡಿಯಿರಿ."

"ಕನ್ನಡವೊಂದೇ ಮುಖ್ಯವಲ್ಲ, ಬಾಳು, ಜೀವ ಜೀವನ ಎಲ್ಲಕ್ಕಿಂತ ಮುಖ್ಯ" ಆದರೆ ಬಾಳನ್ನು ನಡೆಸಲು ಸಾಹಿತ್ಯ, ಭಾಷೆ, ಉಪಕರಣ, ಈ ಉಪಕರಣಗಳಲ್ಲಿ ಕನ್ನಡಿಗರಿಗೆ ಕನ್ನಡ ಭಾಷೆ ಪ್ರಧಾನ.

"ಕನ್ನಡ ನನಗೆ ಮುಂದು, ಉಳಿದುದು ಏನಿದ್ದರೂ ಅದರ ಹಿಂದು."

"ಕನ್ನಡ ಸಾರ್ವಭೌಮವಾಗಿರಲಿ, ಇತರ ಭಾಷೆಗಳು ಸಖಿಯಾಗಿರಲಿ"
"ಕನ್ನಡ ನಾಡಿನಲ್ಲೆ ಕನ್ನಡವನ್ನು ತೊತ್ತಾಗಿ ಮಾಡುವುದು ಬೇಡ".

"ನಮಗೂ ವಿಶಾಲಪ್ರಪಂಚಕ್ಕೂ ಸಂಬಂಧ ಕಲ್ಪಿಸುವ ಭಾಷೆಯೊಂದು ಬೇಕು. ಇಂಗ್ಲಿಷ್ ಆ ಅವಶ್ಯಕತೆಯನ್ನು ಪೂರೈಸುತ್ತದೆ."

"ಒಳ್ಳೆಯ ಸಾಹಿತ್ಯ ಅಮೂಲ್ಯವಾದ ಯಾವುದೇ ವಸ್ತುವಿನಂತೆ, ವೃತ್ತಿಯಂತೆ ಅಪರೂಪವೇ ಸರಿ ಅದು ನಾಡಿನ ಭಾಗ್ಯದಿಂದ, ನುಡಿಯ ಭಾಗ್ಯದಿಂದ ಹೆಚ್ಚು ಹೆಚ್ಚಾಗಿ ಬರುವಂತಾಗಲಿ, ಅದರ ಸೃಷ್ಟಿಕರ್ತರು ಹೆಚ್ಚು ಹೆಚ್ಚಿಗೆ ಮುಂಬರಲಿ."
"ಭಾಷೆಯಿಲ್ಲದೆ ಸಾಹಿತ್ಯವಿಲ್ಲ, ಭಾಷೆ ಬೆಳೆಯದೆ ಸಾಹಿತ್ಯ ಬೆಳೆಯದು ಭಾಷೆ ಫಲವತ್ತಾಗಿ ಶಕ್ತಿಯುತವಾಗಿ ಬೆಳೆದಷ್ಟೂ ಸಾಹಿತ್ಯದ ಗುಣಮಟ್ಟ ಉತ್ತಮಗೊಳ್ಳುವುದು"

"ಬೆಳೆಯೇನೊ ಬೇಕಾದ ಹಾಗಿದೆ. ಅದನ್ನು ಕೊಯ್ಯುವವರು ಕಡಿಮೆ. ಈ ಮಾತು ಕನ್ನಡಿಗ ನೆನಪಿಟ್ಟು ಕನ್ನಡದ ಬೆಳೆ ಕೊಯ್ಯಲು ಮುಂದಾಗಬೇಕು."

"ತಾಳ್ಮೆ ನಮ್ಮ ಸಂಸ್ಕೃತಿಯ ತಿರುಳು, ಕನ್ನಡ ಸಾಹಿತ್ಯದ ಮುಖ್ಯ ಲಕ್ಷಣ. ನಾನು ವೀರಶೈವರಲ್ಲಿ ವೀರಶೈವನಾಗಿ, ಜೈನರಲ್ಲಿ ಜೈನನಾಗಿ ಕ್ರೈಸ್ತರಲ್ಲಿ ಕ್ರೈಸ್ತನಾಗಿ ತಾಳ್ಮೆಯಿಂದ ನಡೆಯಲು ಪ್ರಯತ್ನಿಸುತ್ತೇನೆ. ಎಲ್ಲರೂ ನನ್ನನ್ನು ತಮ್ಮನಂತೆ ಭಾವಿಸಿದ್ದಾರೆ. ಈ ಮರ್ಯಾದೆಗಾಗಿ ತಮಗೆಲ್ಲ ಕೃತಜ್ಞತೆ ಸಲ್ಲಿಸುತ್ತೇನೆ."

"ಕನ್ನಡದ ದೇಸಿ, ರೂಢಿ, ಜಾಯಮಾನ ಪ್ರಕಾಶವಾಗುವಂತೆ ಅಕ್ಷರವರಿಯ ದವರಿಗೂ ಹೆಚ್ಚಾಗಿ ಓದದವರಿಗೂ, ಹೆಂಗಸರು, ಮಕ್ಕಳಿಗೂ ಅರ್ಥವಾಗುವಂತೆ ಸಾಹಿತ್ಯ ನಿರ್ಮಾಣವಾಗಬೇಕು."

"ಕವಿಯಾದವನು ರಾಷ್ಟ್ರಕನೂ ಹೌದು. ಆಯುಧ ಹಿಡಿದು ಯುದ್ಧ ಮಾಡುವ ಸೈನಿಕನು ಮಾತ್ರ ರಾಷ್ಟ್ರಕನಲ್ಲ. ಕವಿಯ ನಿಲುವು, ಸ್ಥಾನ, ಮಾರ್ಗ, ಕಾರ್ಯ ಬೇರೆ, ಆದರೆ ಏತಕ್ಕೂ ಆತ ಮನಸ್ಸನ್ನು ರೂಪಿಸಬಲ್ಲ, ಸ್ಫೂರ್ತಿಮೂಲವಾಗಬಲ್ಲ."

"ಈ ಪ್ರಪಂಚದಲ್ಲಿ ನಿರ್ದಿಷ್ಟವಾದುದು, ಪರಿಪೂರ್ಣವಾದದ್ದು ಯಾವುದೂ ಇಲ್ಲ. ಎಲ್ಲದರಲ್ಲೂ ಒಂದು ಸತ್ಯವಿದೆ, ಒಂದು ವೈಶಿಷ್ಟ್ಯವಿದೆ. ಹಾಗೆಯೇ ಕೊರತೆಯಿದೆ. ಕಲ್ಮಶವಿದೆ".

"ಮನಸ್ಸು ಕಲ್ಲಾಗದೆ ಬೆಳೆಯುತ್ತಿರಬೇಕು
ಏಕಾಂತ ದೃಷ್ಟಿಯಲ್ಲಿ ನಿಲ್ಲಬಾರದು
ಶಾಶ್ವತ ಸತ್ವ ಹುಡುಕುವುದು ಪರಮಧರ್ಮವಾಗಬೇಕು."

"ಚಿನ್ನದೊಡನೆ ಕೂಡುವುದು ಚಿನ್ನ-ಹಿತ್ತಾಳೆಯಲ್ಲ
ಪಾದರಸದೊಡನೆ ಹೊಂದುಕೊಳ್ಳುವುದು ಪಾದರಸ,
ಕಸವಲ್ಲ. ತೂರಬೇಕು, ಸೋಸಬೇಕು,
ಒರೆಗಲ್ಲಿಗೆ ತೀಡಬೇಕು, ನೋಡಬೇಕು."

"ಚಿನ್ನದ ನಾಡದು ಮೈಸೂರು
ಗಂಧದ ಗುಡಿಯದು ಮೈಸೂರು
ವೀಣೆಯ ಬೆಡಗದು ಮೈಸೂರು

"ಕನ್ನಡ ನಾಡಿನ ಅಂಗುಲ ಅಂಗುಲ ಭೂಮಿಯನ್ನು ಮುಟ್ಟಿ ಬರಬೇಕು. ಇಲ್ಲದಿದ್ದರೆ ನೆಮ್ಮದಿ ದೊರಕದು ನನಗೆ."

ಬಿ.ಎಂ.ಶ್ರೀಕಂಠಯ್ಯನವರ ಈ ಮಾತುಗಳು ನುಡಿಮುತ್ತುಗಳು ಕನ್ನಡದ ವೇದವಾಕ್ಯಗಳು.



ಭಾಗ-೧೦

# ಬಿ.ಎಂ.ಶ್ರೀ : ಕೃತಿಗಳು, ಹಸ್ತಾಕ್ಷರಗಳು

೧. 'ಶ್ರೀ'ಯವರ ಕೃತಿಗಳು

೨. 'ಶ್ರೀ'ಯವರ ಇತರ ಕನ್ನಡದ ಬರಹಗಳು

೩. 'ಶ್ರೀ'ಯವರ ಇತರ ಇಂಗ್ಲಿಷ್ ಬರಹಗಳು

೪. 'ಶ್ರೀ' ಬದುಕು-ಬರಹಗಳನ್ನು ಕುರಿತು ಇತರರು ಬರೆದ ಕೃತಿಗಳು

೫. 'ಶ್ರೀ' ಜೀವನ, ವ್ಯಕ್ತಿತ್ವ, ಸಾಹಿತ್ಯ ಕುರಿತ ಲೇಖನಗಳು.

೬. 'ಶ್ರೀ' ಯವರ ಅಧ್ಯಕ್ಷ ಭಾಷಣ
(೧೯೨೮ರಲ್ಲಿ ಕಲಬುರ್ಗಿಯಲ್ಲಿ ನಡೆದ ೧೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ)

೭. 'ಶ್ರೀ'ಯವರು ಹಸ್ತಾಕ್ಷರದಲ್ಲಿ ಧನುಷ್ಕೋಟಿಯಲ್ಲಿ ಬರೆದ ಇಂಗ್ಲಿಷ್ ಕವನ Dhanuskoti-1915

೮. 'ಶ್ರೀ'ಯವರ ಹಸ್ತಾಕ್ಷರದ ಪತ್ರ



## ೧. ಬಿ.ಎಂ.ಶ್ರೀಯವರ ಕೃತಿಗಳು

**ಪುಸ್ತಕದ ಹೆಸರು, ಪ್ರಕಟಣೆಯ ವರ್ಷಗಳು, ಪ್ರಕಾಶಕರ ವಿಳಾಸ**

೧) **A Handbook of Rhetoric,** ೧೯೧೪, ೧೯೧೯

೨) **ಇಂಗ್ಲಿಷ್ ಗೀತಗಳು,** ೧೯೧೯-೨ ಕವನಗಳು 'ವಿದ್ಯಾದಾಯಿನಿ'-ಬಾಪೂ ಸುಬ್ಬರಾವ್, ೧೯೨೧-೧೨ ಗೀತಗಳು, 'ಗ್ರಂಥಮಾಲೆ'-ಬಾಪೂ ಸುಬ್ಬರಾವ್

೧೯೨೪-೨೪ ಗೀತಗಳು 'ಕರ್ನಾಟಕ ಜನಜೀವನ' - ಡಿ.ವಿ. ಗುಂಡಪ್ಪ

೧೯೨೬-ಪುಸ್ತಕ ರೂಪ, ಕರ್ನಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು.

೧೯೪೯ ವಿಶ್ವ ಸಾಹಿತ್ಯ ಮಾಲೆ

೧೯೫೩. ೧೯೫೬.೧೯೬೬.೧೯೭೮ ಕನ್ನಡ ಕವಿ ಕಾವ್ಯವಾಲೆ (ಸಂ) ಎಚ್.ಎಂ. ಶಂಕರನಾರಾಯಣರಾವ್. ಶಾರದಾಮಂದಿರ. ರಾಮಯ್ಯರ್ ರಸ್ತೆ, ಮೈಸೂರು.

೧೯೮೩- ಕನ್ನಡ ಮತ್ತು ಸಂಸ್ಕೃತಿ ಇಲಾಖೆ

೩) **ಗದಾಯುದ್ಧ ನಾಟಕಂ** ೧೯೨೬. ೧೯೩೦. ೧೯೩೬. ಕರ್ನಾಟಕ ಸರ್ಕಾರ, ಬೆಂಗಳೂರು ೧೯೫೪. ೧೯೫೮. ೧೯೭೫-ಕನ್ನಡ ಕವಿ ಕಾವ್ಯಮಾಲೆ, ಶಾರದಾಮಂದಿರ, ರಾಮಯ್ಯರ್‌ರಸ್ತೆ, ಮೈಸೂರು.

೪) **ಅಶ್ವತ್ಥಾಮನ್** - ೧೯೨೯. ೧೯೪೧. ೧೯೫೩. ೧೯೬೮. ೧೯೭೯ ಕನ್ನಡ ಕವಿಕಾವ್ಯಮಾಲೆ, ಶಾರದಾ ಮಂದಿರ, ಮೈಸೂರು

೫) **ಪಾರಸಿಕರು** - ೧೯೩೫ : ೨ ಕಂತುಗಳಲ್ಲಿ, ೧೯೪೯ ಪುಸ್ತಕ ರೂಪ-ಪ್ರಬುದ್ಧ ಕರ್ನಾಟಕ : ೨ ಕಂತುಗಳಲ್ಲಿ ವಿಶ್ವಸಾಹಿತ್ಯಮಾಲೆ

೬) **ಕನ್ನಡ ಛಂದಸ್ಸಿನ ಚರಿತ್ರೆ** - ೧೯೩೬-ಕನ್ನಡ ಕೈಪಿಡಿ-ಭಾಗ ೧

೧೯೫೫. ೧೯೬೫ಮ ೧೯೭೯. ೧೯೭೨. ೧೯೭೫-ಎರಡನೆ ಮೂರನೆಯ ಮುದ್ರಣ ಮೈಸೂರು ವಿಶ್ವವಿದ್ಯಾನಿಲಯ. ಮೈಸೂರು

೭) **ಕನ್ನಡ ಬಾವುಟ** (ಸಂಪಾದಿತ ಸಂಕಲನ) - ೧೯೩೮. ೧೯೪೦. ೧೯೪೮. ೧೯೫೪. ೧೯೫೮. ೧೯೭೮. ೧೯೭೨. ೧೯೭೯

ಕನ್ನಡ ಸಾಹಿತ್ಯ ಪರಿಷತ್ತು ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು.

**೮) ಹೊಂಗನಸುಗಳು ಬಿಡಿ ಕವಿತೆಗಳು –**

೧) ಭರತಮಾತೆಯ ನುಡಿ–೧೯೧೪

೨) ಮೈಸೂರು ಮಕ್ಕಳು – ೧೯೨೦

೩) ಕನ್ನಡ ಹೆಣ್ಣು – ೧೯೨೧

೪) ಶ್ರೀ ಕೃಷ್ಣರಾಜ ಪ್ರಗಾಧ – ೧೯೨೭

೫) ಕನ್ನಡ ತಾಯ ನೋಟ – ೧೯೩೬

೬) ಕನ್‌ನಡದ ಬೀವುಟ – ೧೯೩೮

೭) ಬಾನ್‌ಕೊಂಡ ಕೃಷ್ಣನ್ – ೧೯೪೦

೮) ಶ್ರೀ ಜಯನ ಬೆಳಕು – ೧೯೪೦

೯) ಅರಮನೆಯ ಒಸಗೆ – ೧೯೪೧

೧೦) ಶುಕ್ರಗೀತೆ – ೧೯೪೧

೧೧) ಪಂಪನ ಒರತೆ – ೧೯೪೧

೧೨) ಧರ್ಮದಯ – ೧೯೪೩

೧೩) ಶಿಲಪ್ಪದಿಗಾರಂ ಮುನ್ನುಡಿ

೧೪) ಹಾರೈಕೆ ೧೯೪೫

**ಪುಸ್ತಕ ರೂಪದಲ್ಲಿ :**

೧೯೪೩ – ಶ್ರೀಯವರ ೬೦ನೇ ಹುಟ್ಟಿದ ಹಬ್ಬ

೧೯೪೮ – ವಿಶ್ವಸಾಹಿತ್ಯ ಮಾಲೆ ಕನ್ನಡ ಕವಿ ಕಾವ್ಯ ಮಾಲೆ, ಶಾರದಾಮಂದಿರ, ರಾಮಯ್ಯರ್ ರಸ್ತೆ, ಮೈಸೂರು.

೯) ಕನ್ನಡ ಸಾಹಿತ್ಯ ಚರಿತ್ರೆ – ೧೯೪೭, ೧೯೫೩, ೧೯೬೦

**ಕನ್ನಡ ಕೈಪಿಡಿ+ಭಾಗ–೨**

೧೦) ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ ಭಾಗಗಳು ೧–೨–೩

೧೯೪೮, ೧೯೫೧, ೧೯೬೨, ೧೯೭೦

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಕಾವ್ಯಮಾಲೆ, ಕಾವ್ಯಾಲಯ, ಮೈಸೂರು

೧೧) ಇಸ್ಲಾಂ ಸಂಸ್ಕೃತಿ – ೧೯೪೮, ೧೯೭೦

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೨) ಶ್ರೀ ಸಾಹಿತ್ಯ – ೧೯೮೩, ೨೦೦೨

ಕನ್ನಡ ಅಧ್ಯಯನ ಸಂಸ್ಥೆ, ಸಾರ್ವತ್ರಿಕ ಮಾಲೆ–೩೪, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಅಲ್ಲದೆ,

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಕಟಣೆಗಳ ಪ್ರಧಾನ ಸಂಪಾದಕರು.



## ೨. ಬಿ.ಎಂ.ಶ್ರೀ ಯವರ ಇತರ ಕನ್ನಡದ ಬರಹಗಳು

೧) ಕನ್ನಡ ರಾಮಾಶ್ವಮೇಧ–ಸುಹಾಸಿನಿ ಪತ್ರಿಕೆಯ ೧೯೦೨ ನೇ ಡಿಸೆಂಬರ್ ೨ ನೇ ಸಂಪುಟದಲ್ಲಿ ಮುದ್ರಿತವಾದ ಲೇಖನ.

೨) ಸೂಕ್ತಿ ಸುಧೆ–ಸೂಕ್ತಿ ಸುಧೆ ಪುಸ್ತಕಕ್ಕೆ ಬರೆದ ಮುನ್ನುಡಿ ೩೦–೭–೧೯೨೮

೩) ಕೊಳಲು–ಕುವೆಂಪು ಅವರ ಕೊಳಲು ಕವನ ಸಂಕಲನದ ಮುನ್ನುಡಿ ೨–೧–೧೯೩೦

೪) ಕೋಗಿಲೆ–ಡಿ.ಆರ್. ರಾಮಯ್ಯ ಅವರ 'ಕೋಗಿಲೆ' ಕವನ ಸಂಕಲನದ ಮುನ್ನುಡಿ ೨೬–೧–೧೯೩೧

೫) ಗೀತಗಳು–ವಿ.ಸೀ. ಅವರ 'ಗೀತಗಳು' ಕವನ ಸಂಕಲನದ ಮುನ್ನುಡಿ – ೧೯೩೧.

೬) ಮುಕ್ತದ್ವಾರ–ಶಿವರಾಮಕಾರಂತರ 'ಮುಕ್ತದ್ವಾರ' ಗೀತ ನಾಟಕದ ಮುನ್ನುಡಿ – ೧೯೩೪

೭) ನಾಡಹಬ್ಬ–ರಾ.ಗು.ಜೋಷಿಯವರ 'ನಾಡಹಬ್ಬ' ನಾಟಕದ ಮುನ್ನುಡಿ ೧೨–೧೦–೧೯೩೬

೮) ಕನ್ನಡದ ಒಂದನೆಯ ಪುಸ್ತಕ–ಮೈಸೂರು ವಿದ್ಯಾ ಇಲಾಖೆಯ ಕನ್ನಡ ಒಂದನೆಯ ಪುಸ್ತಕದ ಮುನ್ನುಡಿ ೧೯೩೭

೯) ಪ್ರಭುವರ್ಯರ ಯುರೋಪ್ ಪ್ರವಾಸಕ್ಕೆ ಬರೆದ ಮುನ್ನುಡಿ–೧೯೩೭

೧೦) 'ಮೊಗ್ಗಿನ ಮಾಲೆ' ಕವನ ಸಂಕಲನದ ಮುನ್ನುಡಿ–೧೯೩೭ (ಹೈದರಾಬಾದಿನ ತರುಣ ತಂಡದವರ ಪ್ರಕಟಣೆ)

೧೧) ಹೂ–ಕುಂದಗೋಳದ ತಾರೆಯ ಬಳಗದವರು ಪ್ರಕಟಿಸಿದ–ಹೂ ಕವನ ಸಂಕಲನದ ಮುನ್ನುಡಿ– ೧೯೩೭

೧೨) ಹೊನಲು–ಮೂರ್ತಿಯವರ ಹೊನಲು ಕವನ ಸಂಕಲನದ ಮುನ್ನುಡಿ– ೨೦–೧೧–೧೯೩೭

೧೩) ಕನ್ನಡ ಮೂರನೆಯ ಪುಸ್ತಕ–ಮೈಸೂರು ವಿದ್ಯಾ ಇಲಾಖೆಯ ಕನ್ನಡ ಮೂರನೆಯ ಪುಸ್ತಕದ ಮುನ್ನುಡಿ ೧೯೩೮

೧೪) ಕರ್ಣ–ಎಂ.ಎಸ್. ಅನಂತಪದ್ಮನಾಭರಾವ್ ಅವರ 'ಕರ್ಣ' ಪುಸ್ತಕದ ಮುನ್ನುಡಿ – ೨–೮–೧೯೩೯

೧೫) ಆಂಡ್ರೋಕಾರ್ನೆಗಿ–ಜೆ.ಆರ್.ಜೋಸ್ತರ್ ಅವರ ಆಂಡ್ರೋಕಾರ್ನೆಗಿ ಎಂಬ ಕೋಟ್ಯಾಧೀಶ್ವರನ ಕಥೆ ಪುಸ್ತಕದ ಮುನ್ನುಡಿ. ೧೯೪೦

೧೬) ಮುನ್ನುಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರು–ಓ.ಎಸ್.ಲಿಂಗಣ್ಣಯ್ಯ ಅವರ ಪುಸ್ತಕದ ಮುನ್ನುಡಿ ೧೬–೧–೧೯೪೦

೧೭) ಮಾಸ್ತಿಯವರನ್ನು ಕುರಿತು–ಜೀವನ ೫–೧ ಮಾರ್ಚ್–೪–೧೯೪೦

೧೮) 'ಹಿಂದೂ ದರ್ಶನ ಸಾರ'–ಪುಸ್ತಕದ ಮುನ್ನುಡಿ–ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರಿಂದ ೨೧–೪–೧೯೪೦

೧೯) ಪ್ರಬಂದ ಪ್ರಕಾಶ–ದೇಶಪಾಂಡೆ ಮನೋಹರ ರಾಯರ 'ಪ್ರಬಂಧ ಪ್ರಕಾಶ' ಪುಸ್ತಕದ ಕಿರಿಯರ ಆವೃತ್ತಿ ಮುನ್ನುಡಿ. ೮–೨–೧೯೪೧

೨೦) ಶಾಂತಾ–ಕರ್ನಾಟಕ ಜನಜೀವನ ಮತ್ತು ಅರ್ಥ ಸಾಧಕ ಪತ್ರಿಕೆಯಲ್ಲಿ 5.8ರಲ್ಲಿ ಅಚ್ಚಾದ ವಿಮರ್ಶೆ.

೨೧) ಭಿನ್ನವತ್ತಳೆಗೆ ಉತ್ತರ–ಮೈಸೂರು ಮಹಾರಾಹ ಕಾಲೇಜಿನ ಕರ್ನಾಟಕ ಸಂಘ ಬೆಳ್ಳಿಯ ಹಬ್ಬದಂದು ನೀಡಿದ ಭಿನ್ನವತ್ತಳೆಗೆ ಕೊಟ್ಟ ಉತ್ತರ–'ಬೆಳ್ಳಿಯ ಹಬ್ಬ' – ೧೯೪೪.

೨೨) ಪ್ರಳಯ ತಾಂಡವ–ಜಿ. ವಾಸುದೇವರಾವ್ ಅವರ 'ಪ್ರಳಯ ತಾಂಡವ' ಕವನ ಸಂಕಲನದ ಮುನ್ನುಡಿ–೧೯೪೪

೨೩) ಸಚಿತ್ರ ಶ್ರೀಮಂತ ನಾನಾ ಸಾಹೇಬ ವೇಶವೆ–ನಾರಾಯಣ ವೆಂಕಟೇಶ ಕುರುಡಿ ಅವರ ಗ್ರಂಥಕ್ಕೆ ಮುನ್ನುಡಿ–೧೯೩೩



